

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೫ ಜುಲೈ ೨೦೦೮ ಸಂಚಿಕೆ : ೭



ಮೈಸೂರು ಶ್ರೀ ಸುತ್ತೂರು ಶ್ರೀಕ್ಷೇತ್ರದಲ್ಲಿ ನಡೆದ ಅಭಿವೃದ್ಧಿ ಕುರಿತ ವಿಚಾರ ಸಂಕೀರ್ಣದ ಉದ್ಘಾಟನಾ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀಗಳವರು, ಶ್ರೀ ಸುತ್ತೂರು ಜಗದ್ಗುರುಗಳು, ಭಾರತದ ಘನತೆವೆತ್ತ ರಾಷ್ಟ್ರಪತಿಗಳಾದ ಶ್ರೀಮತಿ ಪ್ರತಿಭಾ ಪಾಟೀಲ್, ರಾಜ್ಯಪಾಲರಾದ ಶ್ರೀ ರಾಮೇಶ್ವರ ಠಾಕೂರ್, ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪ, ವಿರೋಧಪಕ್ಷದ ನಾಯಕರಾದ ಶ್ರೀ ಸಿದ್ಧರಾಮಯ್ಯ ಮೊದಲಾದ ಗಣ್ಯರು ಉಪಸ್ಥಿತರಿದ್ದರು



ಧರ್ಮಸ್ಥಳದ ಪೂಜ್ಯ ಡಾ. ಶ್ರೀ ವೀರೇಂದ್ರ ಹೆಗ್ಗಡೆಯವರು ಶ್ರೀಕ್ಷೇತ್ರ ಧರ್ಮಸ್ಥಳದ ಗ್ರಾಮೀಣಾಭಿವೃದ್ಧಿ ಯೋಜನೆ ಅಂಗವಾಗಿ ಶ್ರೀಮಠಕ್ಕೆ ಭೇಟಿ ನೀಡಿದಾಗ ಪೂಜ್ಯ ಶ್ರೀಗಳವರಿಂದ ಗೌರವ ಸಮರ್ಪಣೆ



ತುಮಕೂರಿನಲ್ಲಿ ವೀರಶೈವ ಸಮಾಜದ ವತಿಯಿಂದ ಏರ್ಪಡಿಸಿದ್ದ ಸಂಸದ ಶ್ರೀ ಜಿ.ಎಸ್. ಬಸವರಾಜ್‌ರವರ ಅಭಿನಂದನಾ ಸಮಾರಂಭದಲ್ಲಿ ಸಿದ್ಧಗಂಗಾ ಕಿರಿಯ ಶ್ರೀಗಳು, ಸಿದ್ಧರಬೆಟ್ಟದ ಶ್ರೀಗಳು ಮೊದಲಾದ ಗಣ್ಯರು ಉಪಸ್ಥಿತರಿದ್ದರು



## ಅಂತರಂಗ




ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
**ಹೆಚ್.ಬಿ. ಗಂಗಾಧರಯ್ಯ**
**ಹಳೆಯ ವಿದ್ಯಾರ್ಥಿಗಳ ಸಂಘ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ**
**ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104




॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಸೆನು ಬಸವೇಶ**

# ಸಿದ್ಧಗಂಗಾ


ಸಂಪುಟ : ೪೫ ಜುಲೈ ೨೦೦೮ ಸಂಚಿಕೆ : ೭


## ಒಳಪುಟಗಳಲ್ಲಿ ......................



ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ


ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

ಕಾಲವ್ಯಾಘ್ರನ ಶಿರವನೊಡೆದು
ಜ್ವಾಲಾಮುಖಗಣೇಶ್ವರನು ದಯವಾಗಿ
ಕಾಲಕಾಮ ಮಾಯಾದಿಗಳ ಮರ್ದಿಸಿ
ಲೀಲೆಯಿಂದ ಓಲಾಡುತ್ತಿದ್ದಾನೆ ನೋಡಾ
ಆ ಜ್ವಾಲಾಮುಖ ಗಣೇಶ್ವರನ
ಉರಿಲಿಂಗವೆದ್ದು ನುಂಗಿದ್ದ ಕಂಡು
ನಾನು ಲಿಂಗೈಕ್ಯನಾದೆನು ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಚಿದಗ್ನಿ ಪ್ರಭೆಯೇ ವದನವಾಗುಳ್ಳ ಶರಣನು, ಜೀವನೆಂಬ ಕಾಲವ್ಯಾಘ್ರನ ಜ್ಞಾನವೆಂಬ ಶಿರಸ್ಸನು, ಸುಜ್ಞಾನವೆಂಬ ದಂಡದಿಂದ ಭಗ್ನವ ಮಾಡಿ, ಯಮ ಕಂದರ್ಪವಿದ್ಯಾಶಕ್ತಿ ಮುಂತಾದವರ ಜ್ಞಾನದ ಪ್ರಪಂಚಿನ ವರ್ತನೆಯನು ತ್ರಿವಿಧ ಲಿಂಗಾನುಭಾವದಿಂದ ನಿವೃತ್ತಿ ಮಾಡಿ, ಬಂದುದ ಲಿಂಗದುದಯ, ಇದ್ದುದೆ ಲಿಂಗದಲ್ಲಿಯ ಸ್ಥಿತಿ, ಹೊಂದಿದುದೆ ಲಿಂಗದಲ್ಲಿಯ ಐಕ್ಯವೆಂದು ಸ್ವಾನುಭಾವ ಗುರೂಪದೇಶದಿಂದರಿದು ಇಷ್ಟಪ್ರಾಣ ಭಾವಲಿಂಗಗಳ ಕ್ರಿಯಾಜ್ಞಾನ ಭಾವಾಚಾರಂಗಳಲ್ಲಿ ಹರುಷಿಸುತ್ತಿರ್ದಪರು.

ಆ ಸುಜ್ಞಾನ ಪ್ರಕಾಶವೆ ವಕ್ತ್ರವಾಗುಳ್ಳ ಶಿವಶರಣನ ಚಿದಗ್ನಿ ಸ್ವರೂಪವಾದ ಪರಬ್ರಹ್ಮವು ಸರ್ವಾಂಗಲಿಂಗವಾಗವ ಗ್ರಹಿಸಿದ್ದನು ಜ್ಞಾನ ದೃಕ್ಕಿನಿಂದೆ ನಿರೀಕ್ಷಿಸುವ, ನಗುತ, ಶಿವಲಿಂಗದಲ್ಲಿ ಸಮರಸೈಕ್ಯವೆಂದರಿದನು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ-ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ವಚನಗಳ ಉಳಿವಿಗೆ ಸೆರಗಕಟ್ಟಿನಿಂತ
ಅಕ್ಕನಾಗವ್ವೆಯ ಸ್ಮರಿಸುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೋಕವಂದಿತ ತಂದೆ ರಾಷ್ಟ್ರಪಿತನೆನಿಸಿದ
ಗಾಂಧಿಮಹಾತ್ಮನ ಸ್ಮರಿಸುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಾಲಬಹಾದ್ದೂರ ಶೀಲವಂತ ಸೂರ್ಯ
ಸರಳಾತ್ಮನ ನೆನೆದು ಸುಖಿಸುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಾನಗಲಪ್ಪಗಳ ಸಪ್ಪಣ್ಣಯೋಗಿಗಳ
ನಿಜಗುಣಶಿವಯೋಗಿ ಪಾವನರ । ಸ್ಮರಿಸುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮೂವಿಧಕೆ ಮೂವಿಧವ ಕೊಟ್ಟು ನೆಟ್ಟನೆ ಸುಳಿವ
ಪ್ರಾಣ ಪ್ರಸಾದಿ ಪಾವನವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಂದೆ ತಾಯಿಯು ನೀನೆ ಬಂಧು ಬಳಗವು ನೀನೆ
ಕುಂದನೆಣಿಸದ ದಯಶೀಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮೊಂದಿಗಿರುವೆನು ನಿಮ್ಮೊಡನೆ ನಡೆವೆನು
ನಿಮ್ಮ ಪಾದುಕೆಗೆ ಸರಿಬರೆನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಣ್ಣನ ನೆನೆವವರ ಬಸವಣ್ಣನ ಹೊಗಳುವವರ
ಬಸವಣ್ಣನ ಹಾಡುವರ ಪ್ರೀತಿಸುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹತ್ತುಸಾವಿರಮಂದಿ ತುತ್ತುಂಡು ನಲಿವರು
ಮತ್ತೆ ಕೈಯೆತ್ತಿ ಮುಗಿವರು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಶಿರಾಮೇಶ್ವರವೆ ಕಲ್ಯಾಣ ಸಂಗಮವೆ
ನಿಮ್ಮ ಪಾವನ ಪರಮಪಾದಗಳು । ಸ್ಮರಿಸುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಸಂಸ್ಕಾರ

ಸುಮಾರು ಅರುವತ್ತು ವರ್ಷಗಳ ಹಿಂದಿನ ಒಂದು ಪ್ರಸಂಗ. ಆಗಿನ ಜಿಲ್ಲಾಧಿಕಾರಿಗಳು ಇಸ್ಲಾಂ ಧರ್ಮೀಯರಾಗಿದ್ದರು. ಅವರು ಶ್ರೀಮಠಕ್ಕೆ ಭೇಟಿ ಕೊಟ್ಟ ಸಂದರ್ಭ. ಶ್ರೀ ಜಿ. ಮರುಳಸಿದ್ಧಯ್ಯ ಸಂಸ್ಥೆಯಲ್ಲಿ ಅಭ್ಯಾಸ ಮಾಡುತ್ತಿದ್ದ ಅವಧಿ. ಶ್ರೀಮಠಕ್ಕೆ ಬಂದು ಹೋಗುತ್ತಿದ್ದ ಗಣ್ಯಮಾನ್ಯರ, ಅಧಿಕಾರಿಗಳ ಆತಿಥ್ಯವನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದನು. ಯಾರಿಗೂ ಯಾವುದರಲ್ಲಿ ಕೊರತೆಯಾಗದಂತೆ ಎಚ್ಚರ ವಹಿಸುತ್ತಿದ್ದನು. ತುಮಕೂರು ಈಗಿನಷ್ಟು ದೊಡ್ಡದಾಗಿ ಬೆಳೆದಿರಲಿಲ್ಲ. ಸಂಸ್ಥೆಯಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆಯೂ ಈಗಿನಷ್ಟಿರಲಿಲ್ಲ. (ಈಗ ಹತ್ತು ಸಾವಿರವಾಗಿದೆ) ಜಿಲ್ಲಾಧಿಕಾರಿಗಳು ಸಂಸ್ಕಾರಶೀಲರು. ಸೌಜನ್ಯವಂತರು. ಅನುಭವಿಗಳು. ಆ ಕಾಲದಲ್ಲಿ ಈಗಿನಂತೆ ಕಿರಿಯ ವಯಸ್ಸಿನವರು ಜಿಲ್ಲಾಧಿಕಾರಿಗಳಾಗಿರುತ್ತಿರಲಿಲ್ಲ. ಆಡಳಿತದ ಮೂಲೆ ಮುಡುಕುಗಳನ್ನು ಬಲ್ಲವರಾಗಿರುತ್ತಿದ್ದರು. ಜಿಲ್ಲಾಧಿಕಾರಿಗಳಿಗೆ ಮತ್ತು ಅವರ ಪರಿವಾರದವರಿಗೆ ಬಿಸ್ಕತ್ತು, ಕಾಫಿಯನ್ನು ಮರುಳಸಿದ್ಧಯ್ಯ ವ್ಯವಸ್ಥೆ ಮಾಡಿದ್ದನು. ಶ್ರೀಮಠದ ಸ್ಥಿತಿಗತಿಗಳ ಪರಿಚಯ ಮಾಡಿಕೊಂಡು ಹಿಂದಿರುಗುವ ಮುಂಚೆ ಜಿಲ್ಲಾಧಿಕಾರಿಗಳು 'ಪಂಡಿತರೇ' ಎಂದು ಮರುಳಸಿದ್ಧಯ್ಯನನ್ನು ತಮ್ಮ ಸಮೀಪಕ್ಕೆ ಕರೆದರು. ಏನಿರಬಹುದು ಎಂಬ ಕುತೂಹಲ ಎಲ್ಲರಿಗೆ. 'ನೋಡಿ, ಮಠಕ್ಕೆ ಯಾರೇ ಬರಲಿ, ಅವರಿಗೆ ಹಣ್ಣು, ಹಾಲುಂಸ್‌ಂಸ್‌ಂಸ್ಂ, ಎಳನೀರು ಕೊಡಿ. ಬಿಸ್ಕತ್ತು ಕೊಡುವುದು ಬೇಡ. ಏಕೆಂದರೆ ಬಿಸ್ಕತ್ತು ತಯಾರು ಮಾಡುವಾಗ ಮಾಂಸವನ್ನು ಬಳಸಿರುತ್ತಾರೆ. ಅದು ಮಠದ ಸಂಸ್ಕೃತಿಗೆ ಸರಿಬರುವಂಥದಲ್ಲ ಎಂದರು. ಇಸ್ಲಾಂ ಧರ್ಮೀಯರಾದ ಅವರು ಹೇಳಿದುದನ್ನು ಕೇಳಿಸಿಕೊಂಡಾಗ ಪರಧರ್ಮದ ಬಗ್ಗೆ ಅವರಿಗೆ ಇರುವ ಗೌರವಾದರಗಳನ್ನು ಕಂಡು ಹೆಮ್ಮೆ ಎನಿಸಿತು. ಸಂಸ್ಕಾರ ದೊಡ್ಡದು.

*

## ಸಂಪಾದಕೀಯ

# ಜೀವನ ಮೌಲ್ಯ

ಮೊನ್ನೆ, ಬುಧವಾರ ದಿನಾಂಕ 01-07-2009ರಂದು ವಿಧಾನಸೌಧದ ಬ್ಯಾಂಕ್ವೆಟ್ ಹಾಲಿನಲ್ಲಿ ನಡೆದ ಕರ್ನಾಟಕ ಕಾರ್ಯನಿರತ ಪತ್ರಕರ್ತರ ಸಂಘದ ಅಮೃತಮಹೋತ್ಸವ ಹಾಗೂ ಪತ್ರಿಕಾ ದಿನಾಚರಣೆ ಸಮಾರಂಭವನ್ನು ಉದ್ಘಾಟಿಸಿದ ಸಂದರ್ಭದಲ್ಲಿ ವಿಧಾನ ಸಭಾಧ್ಯಕ್ಷರಾದ ಶ್ರೀ ಜಗದೀಶ್ ಶೆಟ್ಟರ್ 'ಪತ್ರಿಕಾ ಸ್ವಾತಂತ್ರ್ಯ ಇರಬೇಕು. ಅದನ್ನು ಸ್ವೇಚ್ಛೆಯಾಗಿ ಬಳಸಬಾರದು' ಎನ್ನುವುದರ ಜೊತೆಗೆ 'ಜೀವನದಲ್ಲಿ ಯಾವುದೇ ಮೌಲ್ಯವನ್ನು ಅನುಸರಿಸದವರು ಮೌಲ್ಯಗಳ ಬಗ್ಗೆ ಗಂಟೆಗಟ್ಟಲೆ ಮಾತನಾಡುತ್ತಾರೆ. ಅಪ್ರಮಾಣಿಕರು ಪ್ರಾಮಾಣಿಕತೆ ಬಗ್ಗೆ ಉತ್ತಮ ಭಾಷಣ ಮಾಡುತ್ತಾರೆ. ಇದರಿಂದ ಜನರು ಯಾರನ್ನು ನಂಬಬೇಕು, ಯಾರನ್ನು ನಂಬಬಾರದು ಎಂಬ ಬಗ್ಗೆ ಗೊಂದಲಕ್ಕೆ ಒಳಗಾಗುತ್ತಾರೆ. ಮಾಧ್ಯಮಗಳು ತನಿಖಾ ವರದಿ ಮೂಲಕ ಕಳ್ಳರು ಯಾರೆಂಬುದನ್ನು ಜನರಿಗೆ ತಿಳಿಸಬೇಕು'- ಎಂದು ಹೇಳಿದರು. (ಪ್ರಜಾವಾಣಿ -02.07.2009) ಎಂಬುದು ಪ್ರಕಟವಾಗಿದೆ.

ಶ್ರೀ ಜಗದೀಶ ಶೆಟ್ಟರ್‌ರವರ ಮಾತುಗಳು ಅದೆಷ್ಟು ಜವಾಬ್ದಾರಿಯುತವಾಗಿವೆ. ಕಳಕಳಿಯೊಡಗೂಡಿವೆ. ಮೌಲ್ಯಗಳನ್ನು ಕಳೆದುಕೊಂಡಿರುವವರ ಬಳಗವನ್ನು ಕಂಡು ನೊಂದಿರುವ ನುಡಿಗಳಾಗಿವೆ. ಅಂತೆಯೇ ಅಪ್ರಮಾಣಿಕರ ಭಾಷಣ ಕಲೆಯ ಪ್ರಾವೀಣ್ಯತೆಯ ಭ್ರಷ್ಟತನವನ್ನು ಗಂಭೀರವಾಗಿ ಹೇಳಿದ್ದಾರೆ. ಹೌದು. ಇಂದು ಎಲ್ಲೆಲ್ಲೂ ಎಲ್ಲ ಕ್ಷೇತ್ರಗಳಲ್ಲೂ, ಮೌಲ್ಯವಿಕಲರ, ಅಪ್ರಾಣಿಕನುಡಿಗಾರುಡಿಗರ ವಿಜೃಂಭಣೆಯೇ ನಡೆದಿದೆ. ಮಾಧ್ಯಮಗಳು ವಸ್ತುನಿಷ್ಠವಾಗಿ ಕರ್ತವ್ಯ ಮುಖಿಗಳಾಗುವ ತುರ್ತು ಅನಿವಾರ್ಯವಾಗಿದೆ. ಆದರೆ ಮಾಧ್ಯಮಗಳೂ ಇಂತಹ ದೌರ್ಬಲ್ಯ ಮುಕ್ತವಾಗಿಲ್ಲವಲ್ಲ ಎಂಬುದೇ ಮುಖ್ಯ ಪ್ರಶ್ನೆಯಾಗಿದೆ. ಮಾಧ್ಯಮ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವವರೂ ಸಹ ಮೌಲ್ಯಗಳನ್ನು ಅನುಸರಿಸದಿರುವ, ಅಪ್ರಮಾಣಿಕರಾಗಿರುವವರ ನಡುವೆ ಮಾಧ್ಯಮ ಧರ್ಮವನ್ನು ನಂಬಿ ನಡೆದಿರುವವರು ಎಲೆಮರೆಯ ಹೂವಿನಂತೆ ಇದ್ದಾರೆ. ಮೊದಲು ಮಾಧ್ಯಮರಂಗದಲ್ಲಿರುವವರು ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ. ತಾವು ಸರ್ವತಂತ್ರ ಸ್ವತಂತ್ರರು, ತಮ್ಮನ್ನು ಪ್ರಶ್ನಿಸುವವರಾರೂ ಇಲ್ಲ ಎಂಬ ಭಾವನೆಯಿಂದ ದೂರ ಸರಿಯಬೇಕು. ಜನ ಜಾಣರಿದ್ದಾರೆ.

-ಸಂಪಾದಕ



## ವಿಚಾರ

# ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ

-ಪ್ರೊ. ಡಿ. ಜವರೇಗೌಡ, ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

'ಸಂಕಟದಲ್ಲಿರುವರಿಗೆ ಕನಿಕರ ತೋರುವುದು; ದುರ್ಬಲರಿಗೆ ಸಹಾಯ ಮಾಡುವುದು; ಸತ್ಯವನ್ನು ಪ್ರೀತಿಸುವುದು; ಸ್ವಾತಂತ್ರ್ಯವನ್ನು ರಕ್ಷಿಸುವುದು; ಬಹುರೂಪಿ ದಾಸ್ಯದ ವಿರುದ್ಧವಾಗಿ ಯುದ್ಧ ಹೂಡುವುದು; ಮಡದಿ ಮಕ್ಕಳು ಗೆಳೆಯರನ್ನು ಪ್ರೀತಿಸುವುದು; ಮನೆಯನ್ನು ಸುಖವಾಗಿಡುವುದು; ನಿಸರ್ಗ ಮತ್ತು ಕಲಾಸೌಂದರ್ಯವನ್ನು ಮೆಚ್ಚುವುದು; ಪ್ರತಿಭಾಜನ್ಯ ಶ್ರೇಷ್ಠ ಆಲೋಚನೆಗಳನ್ನು ಮತ್ತು ಜಗತ್ತಿನ ಉತ್ತಮ ಕಾರ್ಯಗಳನ್ನು ಗ್ರಹಿಸುವ ಶಕ್ತಿಯನ್ನು ಕೃಷಿ ಮಾಡುವುದು; ಸದಾ ಪ್ರಸನ್ನಚಿತ್ತದಿಂದಿರುವುದು; ನಿರ್ಭೀತಿಯನ್ನು ಬೆಳೆಸಿಕೊಳ್ಳುವುದು; ತಪ್ಪುದಾರಿ ತುಳಿಯ ದಿರುವುದು; ಪೂರ್ವಗ್ರಹವನ್ನು ಮರೆಯುವುದು; ಪ್ರಚಂಡ ಕ್ಷೋಭೆಯ ನಡುವೆಯೂ ಶಾಂತಿಯಿಂದಿರುವುದು; ಸಾಧ್ಯ ವಾದಷ್ಟು ಉತ್ತಮ ಕೆಲಸವನ್ನೇ ಮಾಡುವುದು; ಕೊನೆಗೆ ನಿರ್ಲಿಪ್ತತೆಯಿಂದಿರುವುದು; ಇದು ವೈಚಾರಿಕ ಮತ, ವೈಜ್ಞಾನಿಕ ಮನೋಧರ್ಮ. ಇಂಗರ್‌ಸಾಲ್‌ನ ಈ ಜೀವನ ಸೂತ್ರಗಳನ್ನು ನೋಡಿದಾಗ ದೇವರ ಕಲ್ಪನೆಯೊಂದನ್ನುಳಿದರೆ ಭಾರತೀಯ ತತ್ವಜ್ಞಾನಿಗಳಿಗೂ ಆತನಿಗೂ ಏನೇನೂ ವ್ಯತ್ಯಾಸವಿಲ್ಲ. ಅಷ್ಟೇ ಅಲ್ಲ. ಅನ್ಯಾಯದ ವಿರುದ್ಧವಾಗಿ ಖಡ್ಗವೆತ್ತಿದ್ದ ಮಹಾ ಮಾನವತಾವಾದಿ.

ಪ್ರತಿಯೊಂದು ಜೀವಿಯಲ್ಲಿಯೂ ಒಂದೇ ದೈವೀಭಕ್ತಿ ಅಥವಾ ಚೈತನ್ಯ ಪ್ರವಹಿಸುತ್ತಿದೆ ಎನ್ನುವ ತತ್ವದ ಆಧಾರದ ಮೇಲೆ ಮತ ನಿಂತಿರುವುದರಿಂದ ಇಡೀ ಮನುಕುಲದ ಮೇಲಣ ಪ್ರೇಮದ ನಿಜವಾದ ಧಾರ್ಮಿಕ ಜೀವನ ಅಭಿವ್ಯಕ್ತಗೊಳ್ಳಬೇಕಾಗಿದೆ. ಜನ ಸ್ವಾರ್ಥಕ್ಕಾಗಿ ಮತದ ಹೆಸರನ್ನು ಬಳಸಿಕೊಳ್ಳುತ್ತಿದ್ದಾರೆಯೇ ಹೊರತು, ಯಾರೂ ಅವರ ಉಪದೇಶವನ್ನು ಜೀವನದಲ್ಲಿ ಕಾರ್ಯಗತಗೊಳಿಸುತ್ತಿಲ್ಲ. ಮತಕ್ಕೂ ಮತಿಗೂ ಸಂಘರ್ಷ ಒದಗಿದಾಗ ಮತಿಯನ್ನು ಗೌರವಿಸಬೇಕಾಗುತ್ತದೆ; ನಿಜಕ್ಕೂ ಅವೆರಡರ ನಡುವೆ ಸಂಘರ್ಷ ಉದ್ಭವಿಸಬಾರದು. ವಿವೇಕಪ್ರಜ್ಞೆಯ ಬೆಳಕಿನಲ್ಲಿ, ಜ್ಞಾನದ ಮಾರ್ಗದರ್ಶನದಲ್ಲಿ ವಿಕಾಸಗೊಳ್ಳುವ ಮನುಷ್ಯನ ಪೂರ್ಣ ಚೇತನದ ಮನೋಧರ್ಮವನ್ನು ಧರ್ಮ ಎಂದು ಕರೆಯಲಾಗಿದೆ. 'ನಿಜವಾದ ಧರ್ಮ ಹೊರಗಿನಿಂದ ಪುಸ್ತಕಗಳಿಂದ ಹಾಗೂ ಬೋಧಕರಿಂದ ಪಡೆದುಕೊಳ್ಳುವಂಥ ಸರಕಲ್ಲ, ಒಳಗಿನಿಂದ ಚಿಮ್ಮುವ ಹೊಂಬೆಳಕು. ಕೇವಲ ಅಭ್ಯಾಸಬಲದಿಂದ ಯಾಂತ್ರಿಕವಾಗಿ ಹೊರುವಂಥ ಮೂಟೆಯೂ ಅಲ್ಲ. ಅದೊಂದು ಆತ್ಮದ ಅಭೀಪ್ಸೆ, ಅದು ಅಂತರಂಗದೊಳಗೆ ಸುರುಳಿ ಬಿಚ್ಚುವ ಬೆಳಕು; ಪ್ರತಿ ಯೊಂದು ಚೈತನ್ಯದ ಧಾತುವಿನಿಂದಲೇ ಹೊರಹೊಮ್ಮುವಂಥ ವಿಶಿಷ್ಟ ಶಕ್ತಿ. ಅದು ಮಾನವ ಸ್ವಭಾವದ ಸಿದ್ಧಿಗಾಗಿ ಲೋಕಸೇವೆಯ ಆನಂದಲಹರಿಯಾಗಿ ಪೂರಣಗೊಳ್ಳು ತ್ತದೆ. ಋತನಿಯಮದಲ್ಲಿರುವ ನಂಬಿಕೆಯೇ ಧರ್ಮ ವೆಂಬುದು ಗಾಂಧೀಜಿಯ ಅಭಿಪ್ರಾಯ. ಯಾವುದೇ ನಿರ್ದಿಷ್ಟ ಪಂಥ ಮತವಲ್ಲ; ಯಾವುದು ಎಲ್ಲ ಮತಗಳ ಸಾಮರಸ್ಯವನ್ನು ಗುರುತಿಸುತ್ತದೆಯೋ, ಯಾವುದು ಮಾನವ ಸ್ವಭಾವವನ್ನು ಬದಲಿಸಿ ಅವನನ್ನು ಸತ್ಯಕ್ಕೆ ಬಂಧಿಸು ತ್ತದೆಯೋ, ಯಾವುದು ಮಾನವ ಹೃದಯವನ್ನು ಸದಾ ಶುಚಿಗೊಳಿಸುತ್ತದೆಯೋ, ಅದೇ ಧರ್ಮ. ಕುವೆಂಪು ಅವರ ವಿಶ್ವಮಾನವ ಗೀತೆಯ ಸಂದೇಶವೂ ಇದೆಯೆ.

'ಬೈಬಲ್ಲು ನಿಜವಾಗಿಯೂ ಜನರನ್ನು ತುಳಿಯುತ್ತದೆ, ದಾಸ್ಯಗೊಳಿಸುತ್ತದೆ ಮತ್ತು ಭ್ರಷ್ಟಗೊಳಿಸುತ್ತದೆ' ಎಂಬ ಇಂಗರ್‌ಸಾಲ್‌ನ ಮಾತು ಸತ್ಯಕ್ಕೆ ದೂರವೇನಲ್ಲ. ಈ ಮಾತು ಜಗತ್ತಿನ ಎಲ್ಲ ಧರ್ಮಗಳಿಗೂ ಧರ್ಮಗ್ರಂಥಗಳಿಗೂ ಸಮುಚಿತವಾಗಿ ಅನ್ವಯಿಸುತ್ತದೆ. 'ಪ್ರತಿಯೊಂದ ಗ್ರಂಥವನ್ನು ಮತವನ್ನು ಹಾಗೂ ತತ್ವವನ್ನು ಮತಿಯ ಒರೆಗಲ್ಲಿಗೆ ಹಚ್ಚುವ ಹಕ್ಕು ಪ್ರತಿಯೊಂದು ಚೈತನ್ಯಕ್ಕೂ ಲಭಿಸುವತನಕ ಜಗತ್ತು ಸ್ವತಂತ್ರವಾಗಿದೆ ಎಂದು ಹೇಳಲಾಗದು ಎನ್ನುವ ಅವನ ಅಭಿಪ್ರಾಯ ಸರ್ವಗ್ರಾಹ್ಯವಾದದ್ದು. ನಾಗರಿಕತೆಯ ವಿಕಾಸಕ್ಕೆ ಮತ ಮತ್ತು ಮತಗ್ರಂಥಗಳು ವಿಘ್ನಗಳಾಗಬಾರದೆನ್ನುವ ಅವನ ಮಾತಿನಲ್ಲಿ ಸತ್ಯವಿದೆ. ಅವನಿಗೆ ಸೇಂದ್ರಿಯ ಸತ್ಯದಲ್ಲಿ ನಂಬಿಕೆ ಇತ್ತೇ ಹೊರತು, ಅಂತರ್ಜ್ಞಾನದಲ್ಲಲ್ಲ. ಆಧ್ಯಾತ್ಮ ಸಾಧನೆಯ ಮಹತ್ವ ಅವನಿಗೆ ಗೊತ್ತಿರಲಿಲ್ಲವೇನೋ ಎನಿಸುತ್ತದೆ. ಆದರೆ ಅವನ ಪ್ರಾಮಾಣಿಕತೆಯನ್ನಾಗಲೀ, ಸತ್ಯನಿಷ್ಠೆಯನ್ನಾಗಲೀ, ಲೋಕಕಲ್ಯಾಣಾಭೀಪ್ಸೆಯನ್ನಾಗಲಿ ಶಂಕಿಸಲಾಗದು.

'ಧರ್ಮವೆಂದರೆ ಮರ ಮೊರಡಿ, ಕಲ್ಲು ಕೊಡ, ಚಿಹ್ನೆ ಬೊಂಬೆ, ಭೂತದೆವ್ವಗಳನ್ನು ಪೂಜಿಸುವುದಲ್ಲ. ಮನುಕುಲದ ಕ್ಷೇಮಕ್ಕಾಗಿ ಶ್ರಮಿಸುವುದೆ ನಿಜವಾದ ಧರ್ಮ-ಎಂಬುದು ಅವನ ನಿಶ್ಚಿತ ಮತ. ಬೆಳಕಿನ ಕಡೆಗೆ, ಒಳ್ಳಿತರ ಕಡೆಗೆ, ಪರಹಿತದ ಕಡೆಗೆ ಮನುಷ್ಯ ತತ್ಪರನಾದಾಗ ಧರ್ಮ ಸಾರ್ಥಕತೆ

ಹೊಂದುತ್ತದೆಂದು, ಚಲನಶೀಲವಾಗಿರುತ್ತ ದೆಂದು ಹೇಳಬಹುದು. ಆತ್ಮ-ಸ್ವಾತಂತ್ರ್ಯ ವಿಚಾರ ಸ್ವಾತಂತ್ರ್ಯ ಮತ್ತು ನೈತಿಕಪ್ರಜ್ಞೆಯೇ ಅದರ ಗುರಿಯಾಗಬೇಕು. ಸತ್ಯಜ್ಞಾನ ನೈತಿಕತೆಗಳಿಗಿಂತ ಶ್ರೇಷ್ಠವಾದ ಧರ್ಮ ಮತ್ತೊಂದಿಲ್ಲ. ನಿಜವಾದ ಧರ್ಮ ಹಿಂದೂ ಇಸ್ಲಾಂ ಕ್ರಿಶ್ಚಿಯನ್ ಧರ್ಮಗಳನ್ನೆಲ್ಲಾ ಒಳಗೊಳ್ಳುತ್ತದೆ, ಅವುಗಳನ್ನು ಸಮನ್ವಯಗೊಳಿಸಿ ಏಕತೆಯನ್ನು ರೂಪಿಸುತ್ತದೆ.

ಆಧ್ಯಾತ್ಮ ಸಾಧನೆ ಧರ್ಮದ ಪ್ರಮುಖ ಗುರಿಯಾಗಬೇಕು, ನಿಜ. ಆದರೆ ಅದೇ ಏಕೈಕ ಗುರಿಯಲ್ಲ. ವ್ಯಕ್ತಿ ಸ್ವಾತಂತ್ರ್ಯ, ವೈಚಾರಿಕ ಸ್ವಾತಂತ್ರ್ಯ ಹಾಗೂ ಸಾಮಾಜಿಕ ಶ್ರೇಯಸ್ಸಾಧನೆ ಧರ್ಮಾದಿ ಸಕಲ ಸಾಧನೆಗಳ ಅನಿವಾರ್ಯೋದ್ದೇಶವಾಗಬೇಕು. ಆಧ್ಯಾತ್ಮ ಸಾಧನೆ ವ್ಯಕ್ತಿ ಸ್ವಾತಂತ್ರ್ಯವನ್ನಾಗಲಿ, ವೈಚಾರಿಕ ಸ್ವಾತಂತ್ರ್ಯವನ್ನಾಗಲಿ, ಸಾಮಾಜಿಕ ಅಭ್ಯುದಯವನ್ನಾಗಲಿ ನಿರಾಕರಿಸುವುದಿಲ್ಲ. ನೈಜಧರ್ಮ ಜನ ಜನರ ನಡುವೆ ಸಮಾನತೆಯನ್ನು ಸಾಮರಸ್ಯವನ್ನು ಕುದುರಿಸಬೇಕು, ದುರ್ಬಲರನ್ನು ಮೇಲೆತ್ತಬೇಕು, ಭೇದ ಭಾವಗಳನ್ನಳಿಸಬೇಕು; ಇವನ್ನು ಸಾಧಿಸದ ಧರ್ಮ ಧರ್ಮವೇ ಅಲ್ಲ. ಹೊಟ್ಟು ತೂರಿ ಕಾಳುಗಳನ್ನುಳಿಸಿಕೊಳ್ಳು ವಂತೆ, ಸಿಪ್ಪೆವಾಟೆಗಳನ್ನು ಬಿಸಾಡಿ ಮಾವಿನ ಹಣ್ಣನ್ನು ಬಳಸಿಕೊಳ್ಳುವಂತೆ, ಇಲ್ಲಣವನ್ನು ಕುಟ್ಟೆ ಹಿಡಿದ ಮರಗಳನ್ನು ತೆಗೆದು ಬಿಸಾಡಿ ಹೊಸ ಮರಗಳನ್ನು ಜೋಡಿಸಿ, ಕ್ರಿಮಿ ನಾಶಕಗಳನ್ನು ಹೊಡೆದು ಹಳೆಯ ಮನೆಯನ್ನು ಶುದ್ಧೀಕರಿಸುವಂತೆ ಮತಗಳಿಗಂಟಿಕೊಂಡಿರುವ ಕಸ ಕೊಳೆ ಕಿಲುಬು ಧೂಳುಗಳನ್ನು ಆಗಾಗ್ಗೆ ತೊಡೆದು ಹಸನುಗೊಳಿಸದಿದ್ದರೆ ಅವು ಮಾನುಕುಲಕ್ಕೆ ಅಪಾಯಕಾರಿಯಾಗುತ್ತವೆ. ಯಾವುದೋ ಒಂದು ಕಾಲದ ಬಿಂದುವಿನಲ್ಲಿ, ಭೂಗೋಳದ ಒಂದು ಮೂಲೆಯಲ್ಲಿ, ಜನಾಂಗದ ಪರಿಸರದಲ್ಲಿ, ಆಗಿನ ಹಾಗೂ ಅಲ್ಲಿಯ ಅಗತ್ಯಗಳಿನುಗುಣವಾಗಿ ಉದಯವಾದ ಮತ ಎಲ್ಲ ಕಾಲಕ್ಕೂ ಎಲ್ಲ ದೇಶಗಳಿಗೂ ಏಕಪ್ರಕಾರವಾಗಿ ಅನ್ವಯಿಸಬೇಕೆಂದು ತಿಳಿಯು ವುದೇ ಹೆದ್ದಪ್ಪು. ಜಗತ್ತಾಗಲಿ, ಸಮಾಜವಾಗಲಿ, ಜ್ಞಾನವಾಗಲಿ ನಿಂತ ನೀರಲ್ಲ; ನಿಂತ ನೀರು ಬಚ್ಚಲಾಗುತ್ತದೆ. ಚಲನಶೀಲವೇ ಜಗತ್ತಿನ ಲಕ್ಷಣ. ಋತುಚಕ್ರ ಪರಿವರ್ತನೆ ಋತುನಿಯಮ. ಹರಿದ ಕೊಳೆಯ ಬಟ್ಟೆಯನ್ನೊಗೆದು ಹೊಸ ಬಟ್ಟೆಗಳನ್ನು ಧರಿಸಬೇಕಾದ್ದು ವಿವೇಕಿಗಳ ಧರ್ಮ. ಎಂದೋ ಹುಟ್ಟಿದ ಮತ ಇಪ್ಪತ್ತನೆಯ ಶತಮಾನದ ವಿಜ್ಞಾನ ಯುಗಕ್ಕೂ ಸಂಪೂರ್ಣವಾಗಿ ಅನ್ವಯವಾಗುತ್ತದೆಂದು ತಿಳಿಯುವುದು ಬರಿಯ ಭ್ರಮೆ. ಪ್ರತಿಯೊಂದು ಮತದಲ್ಲಿ ರುವ ಶಾಶ್ವತ ಮೌಲ್ಯಗಳನ್ನು ಸ್ವೀಕರಿಸಿ, ಮೌಢ್ಯಾಚಾರ ಸಂಪ್ರದಾಯಗಳನ್ನು ಸಂಪೂರ್ಣವಾಗಿ ತಿರಸ್ಕರಿಸಬೇಕಾದ್ದು ಶ್ರೇಯೋಕಾಂಕ್ಷಿಗಳ ಕರ್ತವ್ಯ ಕರ್ಮ. ಮತಿಯ ಸರ್ವೋ ತ್ಕೃಷ್ಟತೆಯ ನ್ನೊಪ್ಪಿಕೊಳ್ಳದ, ವೈಚಾರಿಕ ಪ್ರವೃತ್ತಿಯನ್ನು ಮೆಚ್ಚದ, ವೈಜ್ಞಾನಿಕ ಮನೋಧರ್ಮಕ್ಕೆ ಬೆಂಬಲ ನೀಡದ, ತ್ಯಾಜ್ಯ. ವಿಚಾರಕ್ಕೆ ಹಾನಿಯೊದಗಿದಾಗಲೇ ಧರ್ಮಕ್ಕೆ ಗ್ಲಾನಿಯೊದಗುತ್ತದೆ. ಧರ್ಮಕ್ಕೆ ಗ್ಲಾನಿಯೊದಗಿದಾಗ, ಭಗವಂತ ಪ್ರಾಣಿರೂಪ ದಲ್ಲಿಯೇ ಅವತರಿಸಬೇಕಾಗಿಲ್ಲ. ಕ್ರಾಂತಿ ರೂಪದಲ್ಲಿಯೂ ಅವತರಿಸಬಹುದು. ಜಗತ್ತು ಹಿಂದೆಂದೂ, ಈತನಕವೂ ಕಾಣದ ಇಂಥದೊಂದು ಕ್ರಾಂತಿಯ ಉದಯಕ್ಕೆ ಕಾರಣ ರಾದವರು ಹನ್ನೆರಡನೆಯ ಶತಮಾನದ ವಚನಕಾರರು; ಅವರಿಗೆ ನೇತಾರರಾದವರು ಬಸವಣ್ಣ ಅಲ್ಲಮಪ್ರಭುಗಳು. ವಿಚಾರದ ಬೆಳಕಿನಲ್ಲಿ ಜಗತ್ತು ಆ ಹಿಂದೆ ಮತ್ತು ಆ ಮುಂದೆ ಕಾಣದ ಸಮಗ್ರ ಕ್ರಾಂತಿಯನ್ನವರು ಬೆಳೆಸಿದರೆಂಬುದು ಭಾರತೀಯರಿಗೆ ಹೆಮ್ಮೆಯ ವಿಷಯವಾಗಿದೆ.

ವೈಚಾರಿಕ ಬುದ್ಧಿ ಮತ್ತು ವೈಜ್ಞಾನಿಕ ಮನೋಧರ್ಮ ಇಪ್ಪತ್ತನೆಯ ಶತಮಾನದ ವಿಶಿಷ್ಟ, ಅಭೂತಪೂರ್ವ ಲಕ್ಷಣಗಳೆಂದು ಹೇಳಲಾಗಿದೆ. ಸತ್ಯಾನ್ವೇಷಣೆಯೇ ಅವೆರಡರ ಗುರಿ. ಅವೆಂದೂ ಅಜ್ಞಾನ ಮೌಢ್ಯ ಜೀರ್ಣ ಜಡ ವ್ಯವಸ್ಥೆಗಳನ್ನು ಸಹಿಸವು. ವೀಕ್ಷಣೆ ಪ್ರಯೋಗ ಪರೀಕ್ಷೆಗಳಲ್ಲಿ ತೇರ್ಗಡೆಯಾದ, ಕಾರಣ ಕಾರ್ಯಸಂಬಂಧವುಳ್ಳ ಸಂಗತಿಯೇ ಸತ್ಯವೆಂದು ವಿಜ್ಞಾನ ಸಾರುತ್ತದೆ. ಸಾಮಾನ್ಯ ವಾಗಿ ವೈಜ್ಞಾನಿಕ ಸತ್ಯವನ್ನು ನಿರ್ಣಯಿಸುವಲ್ಲಿ ಬುದ್ಧಿಯ ಜತೆಗೆ ಬಾಹ್ಯ ಪ್ರಯೋಗ ಸಾಧನಗಳು ಅನಿವಾರ್ಯವಾಗುತ್ತವೆ; ವೈಚಾರಿಕ ಸತ್ಯಕ್ಕೆ ಮತಿಯೇ ಒರೆಗಲ್ಲು. ಮೂಲತಃ ಅವೆರಡೂ ಪ್ರತ್ಯೇಕವಲ್ಲ. ಒಂದು ಮತ್ತೊಂದಕ್ಕೆ ಪೂರಕ, ಹಾಗೂ ಪ್ರೇರಕ, ಕಳೆದ ಶತಮಾನದಲ್ಲಿ ವೈಜ್ಞಾನಿಕ ಕ್ರಾಂತಿಯ ಜತೆಜತೆಗೆ ವೈಚಾರಿಕ ಕ್ರಾಂತಿಯೂ ನಡೆಯಿತೆಂಬುದಂತು ಸುಸ್ಪಷ್ಟ. ನಿಜವಾಗಿ ನೋಡಿದರೆ ಅವೆರಡೂ ಅವಳಿ-ಜವಳಿಗಳು. ವಿವೇಕದ ಹಾಗೂ ನಿರಂಕುಶಮತಿಯ ಸಾರ್ವ ಭೌಮತ್ವವನ್ನು ಯಾವ ತಕರಾರೂ ಇಲ್ಲದೆ ಒಪ್ಪಿಕೊಂಡು, ಅನುಭವ ಪ್ರಯೋಗಗಳ ಮೂಲಕ ಪರೀಕ್ಷಿಸಬಹುದಾದ ತಾತ್ವಿಕ ಮತ್ತು ನೈತಿಕ ವ್ಯವಸ್ಥೆಗಳನ್ನು ಸಂಸ್ಥಾಪಿಸುವ ಗುರಿಯನ್ನುಳ್ಳ ಮನೋಧರ್ಮವೇ ವೈಚಾರಿಕತೆ. ಆದರೆ ವಿಜ್ಞಾನವಿನ್ನೂ ಕತ್ತಲೆಯಲ್ಲಿ ತೆವಳುತ್ತಿರುವಾಗಲೇ, ಹನ್ನೆರಡನೆಯ ಶತಮಾನದಲ್ಲಿಯೇ ಕನ್ನಡನಾಡಿನಲ್ಲಿ ವೈಚಾರಿಕ ಕ್ರಾಂತಿ ನಡೆದದ್ದು ಸೋಜಿಗದ ಸಂಗತಿ.

ಮುಂದುವರೆಯುತ್ತದೆ.





# ಆತ್ಮೋದ್ಧಾರವೇ ಲೋಕೋದ್ಧಾರವೆಂದ ಬಸವಣ್ಣ

-ಡಾ|| ರುದ್ರಣ್ಣ ಚಿಲಿಮಿ, ಪ್ರಾಧ್ಯಾಪಕರು-ಸಂಯೋಜಕರು, ದೂರಶಿಕ್ಷಣ ಸ್ನಾ.ಅ.ಕೇಂದ್ರ, ಹಾರೋಗೇರಿ.

'ಇಲಿಯಾಗಿ ನೂರು ವರ್ಷ ಬಾಳುವುದಕ್ಕಿಂತ ಹುಲಿಯಾಗಿ ಮೂರೇ ಮೂರು ವರ್ಷ ಬಾಳಿದರೆ ಸಾಕು ಎಂಬುದೊಂದೆ ಗಾದೆಯ ಮಾತು ಹೇಳಿದ ಅಂದಿನ ಶರಣರು ಗುರು-ಹಿರಿಯರು ಬದುಕಿದ್ದು ಇದೇ ಹಾದಿಯಲ್ಲಿ. ಅವರು ಲೇಸೆನಿಸಿಕೊಂಡು ಒಂದು ಚಣ(ಕ್ಷಣ) ಬದುಕಿ ದರೂ ಚಿಂತೆಯಿಲ್ಲ; ಅಂಥ ಪವಿತ್ರ ಬಾಳು ಸಾಗಿಸ ಬೇಕಾದುದು ಮಾನವನ ಧರ್ಮವೆಂದು ನುಡಿದು ಅದರಂತೆ ನಡೆದಿರುವವರು. ಸಕಲ ಜೀವಾತ್ಮರಿಗೆ ಲೇಸನೇ ಬಯಸುವುದು, ಸತ್ಕಾರ್ಯವೆಸಗುವಲ್ಲಿ ಸಜ್ಜನ-ಸಾಧು-ಸಂತ-ಶರಣರ ಸಂಗವನ್ನೇ ಮಾಡುವುದು. ಜಾತಿ-ವಿಜಾತಿಯೆನಿಸ ದಿರುವುದು, ಎಲ್ಲವರೂ ನಮ್ಮವರು ಎಂಬ ಭಾವದಲ್ಲಿಯೇ ಸಕಲ ಸಂಪತ್ತು ಕಾಣುವುದು, ತನ್ನ ಉದ್ಧಾರ ದೊಂದಿಗೆ ಸಕಲ ಉದ್ಧಾರವಿದೆಯೆಂದರಿಯುವುದು, ಕೂಡಲಸಂಗನ ಶರಣರ ಅನುಸಂಧಾನ ಮಾಡುವುದು. 'ಅರಿದಡೆ ಶರಣ-ಮರೆದಡೆ ಮಾನವ' ಎಂಬ ಬಸವ ಬೋಧೆಯನ್ನು ಪದೇ ಪದೇ ಮೆಲುಕು ಹಾಕುತ್ತ ಅನುಷ್ಠಾನಕ್ಕೆ ತರುವುದು. ವಚನಗಳ ಮೌಲ್ಯವನ್ನು ಹೇಳುತ್ತ ಕಾರ್ಯರೂಪಕ್ಕೆ ತರುವುದೇ ಮುಖ್ಯವೆಂಬುದನ್ನು ಪ್ರತಿಯೊಬ್ಬ ಹೇಳುಗನು ಅರಿತುಕೊಳ್ಳುವುದು. ದಯವೇ ಧರ್ಮದ ಮೂಲವೆಂಬುದು ಪ್ರಮುಖವಾದ ಅಂಶ. ಕಷ್ಟ ಕಾಲ ಬಂದೊದಗಿದಾಗ ಅಥವಾ ಆಪತ್ಕಾಲಕ್ಕಾದವನೇ ನಿಜ ಶರಣನು. ತನ್ನಲ್ಲಿರು ವಂತಹ ವಸ್ತು ಯಾವುದೇ ಇದ್ದರೂ ಬಡವರಿಗೆ, ಅನಾಥರಿಗೆ, ದೀನ-ದಲಿತರಿಗೆ, ಭಿಕ್ಷುಕರಿಗೆ ಸಮಯೋಚಿತ ವನರಿತು ದಾನ ಮಾಡುವುದು. ತಾನು ಮಾಡಿದ್ದು ಈ ದಾನವೆಂದು ಮನದಲ್ಲಿಯೂ ನೆನೆಯಬಾರದು. ಅಂಥ ಭಾವಭ್ರಮೆಯಿಂದ ಮಾಡಿದ ದಾನವು ಪಡೆದವನಿಗೆ ಒಳಿತಾಗು ವುದಿಲ್ಲವೆಂದು ಬಸವ ಧರ್ಮವಷ್ಟೇ ಅಲ್ಲ ಎಲ್ಲ ಧರ್ಮಗಳಲ್ಲೂ ಪ್ರತಿಪಾದಿತವಾಗಿದೆ. ಆತ್ಮಕಲ್ಯಾಣದ ಜೊತೆ ಜೊತೆಗೆ (ಲೋಕ ಕಲ್ಯಾಣ) ಸಮಾಜದ ಕಲ್ಯಾಣದ ಹೆಬ್ಬಯಕೆಯಾಗ ಬೇಕು. ಆ ತರಹದ ಬದುಕಿಗೆ ದೇವನು ಮೆಚ್ಚಿಯಾನು! ಆ ದೇವನು ತಂದೆಯ ರೂಪದಲ್ಲಿ ತಾಯಿಯ ರೂಪದಲ್ಲಿ, ಇನ್ನಿತರ ಬಂಧು-ಬಳಗದ ರೂಪದಲ್ಲಿ ದರ್ಶನವೀಯುತ್ತಾನೆ. ಅವನನ್ನರಿತುಕೊಳ್ಳುವುದು ಕಠಿಣವೆನಿಸುವುದಾದರೂ- ಏಕೋಭಾವ ದಿಂದ, ತದೇಕಚಿತ್ತದಿಂದ ಆತನ ಧ್ಯಾನ, ಸ್ಮರಣೆ, ಪೂಜೆ, ಜಪ, ತಪ, ಕಾಯಕದಲ್ಲಿ ನಿರತನಾದಾಗಲೂ ಆತನ ಧ್ಯಾನ ಮಾಡ ಮಾಡುತ್ತ, ನಿಮ್ಮ ನಿಮ್ಮ ಕಾಯಕದಿಂದ ಬಂದದ್ದರಲ್ಲಿ ಸ್ವಲ್ಪ ಭಾಗವನ್ನು ಜಂಗಮರ ದಾಸೋಹಕ್ಕೆಂದು ಮೀಸಲಿಡುವುದೂ ಮಾನವನ ಧರ್ಮ-ಶರಣರ ಧರ್ಮ.

ಪ್ರಪಂಚದಲ್ಲಿರುವ ಪ್ರತಿಯೊಂದು ಪಶು-ಪಕ್ಷಿ, ಕ್ರಿಮಿ-ಕೀಟಾದಿಗಳಲ್ಲಿ ಜೀವದಯೆ ತೋರುವುದು ನಮ್ಮ ಧರ್ಮ. ಅದರಿಂದು ಶೀಲವಂತರ ಓಣಿಯಲ್ಲಿ ಕೋಳಿ ಮಾಯವಾಗುತ್ತಿದೆ. ಹುಡುಕಿದರೂ ಶೀಲವಂತರು ಸಿಗಲಾರರು. ಜೀವ ಜೀವಿಯ ಕೊಂದು ಜೀವಿಪುದು ಜಗವೆಲ್ಲವೆಂಬಂತಾಗಿದೆ. ಅದುದರಿಂದ ಶರಣರು-ಸಂತ-ಮಹಂತರು ಪುಣ್ಯ ಕರ್ಮಗಳನ್ನೇ ಮಾಡಿರಿ; ನಿಮ್ಮ ಕಲ್ಯಾಣದ ಜೊತೆಗೆ (ಸಮಾಜದ) ಲೋಕ ಕಲ್ಯಾಣವನ್ನು ಮಾಡುವಂತವರಾಗಿರೆಂದು ಸಾರಿ ಸಾರಿ ಹೇಳಿರುವರು.

ಬದಲಾವಣೆಯು ಜೀವಂತಿಕೆಯ ಲಕ್ಷಣ. ಬೆಳವಣಿಗೆ ಜೀವಂತಿಕೆಯ ಸಂಕೇತ. ಸಕಲ ಚರಾಚರ ಸುವ್ಯವಸ್ಥಿತವಾಗಿ ಬದುಕಲೆಂಬುದು ಮತ್ತು ಸೃಷ್ಟಿಕರ್ತನ ಸದಿಚ್ಛೆಯ ಮೇರೆಗೆ ಈ ಸೃಷ್ಟಿಯು ನಿರ್ಮಾಣವಾಗಿದೆ. ಆ ತರದ ವ್ಯವಸ್ಥೆಯೊಂದು ಅದಕ್ಕೆ ಪೂರಕವಾಗಿ ನಿಯತವಾದ ಗತಿಯೊಂದು ಸ್ಥಾಪಿತವಾಗಿದೆ. ತಾನೂ ಬದುಕಬೇಕು ಅನ್ಯರೂ ಬದುಕವಂತಾಗಬೇಕು. ಹೀಗೆ ಬದುಕುವುದಕ್ಕೆ ಒಬ್ಬೊಬ್ಬರಿಗೆ ಒಂದೊಂದು ಶಕ್ತಿ ದೈವದತ್ತವಾಗಿ ಒದಗಿ ಬಂದಿರುತ್ತದೆ. ಸದ್ಭಾವ, ಸದಾಚಾರ ಮತ್ತು ಸಂತ ಶರಣರ ಬದುಕಿನ ಮೂಲ ಸೂತ್ರವಾಗಿದೆ. ಅಂತೆಯೇ ಬಸವಣ್ಣನವರು 'ಕೂಡಲಸಂಗಮದೇವನನೊಲಿಸಬಂದ ಪ್ರಸಾದ ಕಾಯವ ಕೆಡಿಸಲಾಗದು' ಎಂದಿದ್ದಾರೆ. ಇದು ನಮಗೆಲ್ಲರಿಗೂ ಅರಿವಿನ ಮಾತಾಗಿದೆ. ಆತ್ಮ ವಿಮರ್ಶೆಯಿಂದ ಅರಿವು ಎಚ್ಚರವಾಗುತ್ತದೆ. ಬಸವಣ್ಣನ ಉದ್ದೇಶ ಬರೀ ಆತ್ಮೋದ್ಧಾರವಲ್ಲ ಲೋಕೋದ್ಧಾರವಾಗಿತ್ತು.

ಮನುಷ್ಯನ ಬದುಕನ್ನು ರೂಪಿಸುವುದಕ್ಕೆ ಬರೀ ಆಧ್ಯಾತ್ಮವೊಂದೇ ಸಾಲದು, ಲೌಕಿಕವೂ ಬೇಕು. ಲೌಕಿಕ ಆರೋಗ್ಯಕರವಾಗದೆ ಆಧ್ಯಾತ್ಮಕ್ಕೆ ಹುಟ್ಟು ಇಲ್ಲ, ಬೆಳವಣಿಗೆಯೂ ಇಲ್ಲ. ಬದುಕು ಹಸನಾಗಬೇಕಾದರೆ ಆತ್ಮ ವಿಮರ್ಶೆ ಅಗತ್ಯ. ಭಕ್ತಿಯನ್ನು ಬಳಸಿಕೊಂಡು ದೇವರನ್ನು ಒಲಿಸಿಕೊಂಡವರು ಬಹಳ. ಆದರೆ ಭಕ್ತಿಯನ್ನು ಬಳಸಿ ಜನಮನವನ್ನು ಒಲಿಸಿಕೊಂಡವರು ವಿರಳವೆಂದೇ ಹೇಳಬೇಕು. ಬಸವಣ್ಣನವರು ಈ ಪಂಥಕ್ಕೆ ಸೇರಿದವರು. ಕೂಡಲ ಸಂಗಮನನ್ನು ಪೂಜಿಸುವಲ್ಲಿ ಬಸವಣ್ಣನಿಗೆ ಯಾವ ಭಕ್ತಿಯ ಸಾಧನೆಯಾದುದೋ, ಅದೇ ತರಹದ ಭಕ್ತಿಯು ಜನತೆಯ ಸೇವ ಮಾಡುವಲ್ಲಿಯೂ ಸಾಧನೆಯಾದುದು. ಆದುದರಿಂದ

ಸಕಲ ವಿಸ್ತಾರದ ರೂಹು ನೀನೇ ದೇವಾ ಎಂದಿದ್ದಾರೆ. ಜಂಗಮ ಮುಖದಲ್ಲಿ ಲಿಂಗವ ಕಂಡಾತ ಬಸವಣ್ಣ. ಅವನ ದೃಷ್ಟಿಯಲ್ಲಿ ಜೀವಕುಲವೇ ಜಂಗಮ. ಈ ಜೀವಕುಲ ಸೇವೆಯೇ ಜಂಗಮ ಸೇವೆ, ಲಿಂಗಸೇವೆ, ಈ ಜೀವಕುಲದಿಂದ ತಾನು ಭಿನ್ನನಲ್ಲ ಎಂಬ ಅನುಭಾವದ ಸೇವೆ ಬಸವಣ್ಣನಿಂದಾಗಿ ದಾಸೋಹ ಭಕ್ತಿಯಾಗುತ್ತದೆ. ಲಿಂಗ-ಜಂಗಮರ ಸೇವೆ ಮಾಡುವಲ್ಲಿ ತೋರುವ ತನ್ಮಯತೆಯನ್ನು ಜನತೆಯ ಸೇವೆ ಮಾಡುವಲ್ಲಿಯೂ ತೋರುತ್ತಾನೆ. ಅದಕ್ಕಾಗಿ ಬಸವಣ್ಣ ಗೈದ ಸೇವೆಯನ್ನು ಭಕ್ತಿಯೆಂದೇ ಕರೆಯಬೇಕಾಗುತ್ತದೆ. ಭಕ್ತಿ ಭಂಡಾರಿ ಬಸವಣ್ಣ ಎಂದು ಕರೆದದ್ದು ಇದೇ ಅರ್ಥದಲ್ಲಿ. ಭಕ್ತಿ ಭರಿತ ಸೇವೆಯೇ ಧರ್ಮವೆನಿಸುತ್ತದೆ. 'ಪಾಪಿ ದೇವೋಭವಃ ಪತಿತ ದೇವೋಭವಃ' ಎಂಬ ಅರಿವೇ ಧರ್ಮವೆಂದು ಅರಿತವರಿವರು. ಪಾಪಿಗಳನ್ನು ಕ್ಷಮಿಸಿ ಪರಿವರ್ತಿಸುವಲ್ಲಿಯೇ ಧರ್ಮವಿದೆಯೆಂದಿದ್ದಾರೆ. ಇದು ಯೇಸುವಿನ ಸಂದೇಶ. ಎಲ್ಲ ಮಹಾತ್ಮರ ಸಂದೇಶವೂ ಆಗಿದೆ. ಪಾಪ ನಿವಾರಣೆಗೆ ಕ್ಷಮಾಶೀಲ ಗುಣ ಅವಶ್ಯ. ಕಳ್ಳರು ಆಕಳು ಕದ್ದಾಗ ಮನೆಯ ಸೇವಕರು ರಂಭಾಟ ಮಾಡುತ್ತಾರೆ. ಆ ಸಂದರ್ಭದಲ್ಲಿ ಬಸವಣ್ಣ ಹೇಳಿದ್ದು ಹೀಗೆ-'ಅಲ್ಲಿ ಉಂಬರೆ ಸಂಗ, ಇಲ್ಲಿ ಉಂಬರೆ ಸಂಗ, ಕೂಡಲಸಂಗಮದೇವ ಏಕೋಭಾವ' ಎನ್ನುತ್ತಾರೆ. ಇಲ್ಲಿ ಕ್ಷಮಾಶೀಲ ಗುಣವಷ್ಟೇ ಎದ್ದು ಕಾಣುವುದಿಲ್ಲ; ಅದಕ್ಕಿಂತಲೂ ಮಿಗಿಲಾದ ಏಕಾತ್ಮತಾಭಾವ ಎದ್ದು ಕಾಣುತ್ತದೆ. ಯಾರು ಉಂಡರೂ ಆ ತೃಪ್ತಿ ಆ ಪರಮಾತ್ಮನಿಗೇ ಸಲ್ಲುತ್ತದೆ. ಮಡದಿಯ ವಡವೆ ಕದ್ದವರ ಬಗೆಗೆ ಬಸವಣ್ಣ ತಾಳಿದ್ದು ಒಂದು ವಿಶಿಷ್ಟ ನಿಲುವು. ಬಹಳಷ್ಟು ಜನರಿಗಿಲ್ಲದ ಒಡವೆ ತನ್ನಲ್ಲಿ ಇರುವುದರಿಂದ ಅದೊಂದಿ ರೀತಿಯ ಕಳ್ಳತನವೇ ಸರಿ. ಇದನ್ನು ತನಗಾಗಿ ಹೇಳಿಕೊಂಡ ಬಸವಣ್ಣನ ಮಾತು ಇಡೀ ಜಗತ್ತಿಗೇ ಅನ್ವಯಿಸುತ್ತದೆ. ಆತ್ಮ ವಿಮರ್ಶೆ, ಸಮಾಜ ವಿಮರ್ಶೆ, ಜೊತೆ ಜೊತೆ ಯಾಗಿಯೇ ನಡೆಯುತ್ತದೆ. ಬಸವಣ್ಣ ಸೂಕ್ಷ್ಮಮತಿ, ವಿಚಾರಶೀಲ, ಸಹನಶೀಲ, ವಿಶ್ಲೇಷಣೆ ಅವನ ದಾರಿ, ಪರಿವರ್ತನೆ ಅವನ ಧೋರಣೆಯಾಗಿತ್ತು. ಅದನ್ನು ಆತ್ಮ ವಿಮರ್ಶೆಗೊಳಪಡಿಸಿ ಸಮಾಜದ ಕಡೆಗೆ ತಿರುಗಿಸಿದವನು.

ವ್ಯಕ್ತಿಯಾಗಲಿ, ಸಮಾಜವಾಗಲಿ ನಿಷ್ಕಂಟಕವಾಗಬೇಕು. ಅಂದಾಗ ನೆಮ್ಮದಿಯಿಂದ ಬದುಕಬಹುದು. ದಾಸೀಪುತ್ರರಾಗಲೀ, ವೇಶ್ಯಾಪುತ್ರರಾಗಲೀ ಶಿವದೀಕ್ಷೆಗೆ ಅರ್ಹರು ಎಂಬ ನಿಲವು ಬಸವಣ್ಣನಲ್ಲಿಯ ಮಾನವೀಯ ಮನೋಧರ್ಮದ ಪರಮೋನ್ನತಿಯನ್ನು ತಿಳಿಸುತ್ತದೆ. ಬಸವಣ್ಣ ಎಷ್ಟು ಸರಳ ಹೃದಯಿಯೋ ಅಷ್ಟೇ ನಿಷ್ಠುರವಾದಿ. 'ನ್ಯಾಯ ನಿಷ್ಠುರಿ ದಾಕ್ಷಿಣ್ಯ ಪರನಲ್ಲ' ಎಂದಿದ್ದುದನ್ನು ಗಮನಿಸಿದರೆ ಅವನ ದೃಷ್ಟಿಯಲ್ಲಿ ಅಪರಾಧಿಗಳನ್ನು ಪತಿತರನ್ನು ಕ್ಷಮಿಸುವುದು, ಸತ್ಕಾರ್ಯ, ಸದ್ಧರ್ಮ, ಪತಿತರು ಪಾವನರಾಗುವುದಕ್ಕೆ ಅವಕಾಶ ಕೊಡುವುದು ಮಾನವಧರ್ಮವಾಗಿದೆ. ಮನುಷ್ಯ-ಮನುಷ್ಯರನ್ನು ತಿದ್ದುವುದಕ್ಕಾಗಿ ಧರ್ಮ ಹುಟ್ಟಿದ್ದುಂಟು. ಆಚಾರ-ವಿಚಾರದಿಂದಾಗಿಯೇ ಮನುಷ್ಯ ಮೇಲಾಗಬಹುದು, ಕೀಳಾಗಬಹುದು ಹೊರತಾಗಿ ಯಾರೂ ಮೂಲತಃ ಕ್ಷುಲ್ಲಕನಾಗಿರುವುದಿಲ್ಲ. ಕೆಳಕ್ಕೆ ಬಿದ್ದವರನ್ನು ಮೇಲೆತ್ತಿ ಹಿಡಿಯುವುದೇ ಮುಖ್ಯ ಉದ್ದೇಶವಾಗಬೇಕು. ಎತ್ತಿ ಹಿಡಿಯುವುದರಲ್ಲಿ ಜಾತಿ, ಮತ, ಪಂಥ, ಬಡವ, ಬಲ್ಲಿದ, ಪಾಪಿ, ಪತಿತ, ಹೆಣ್ಣು, ಗಂಡು ಈ ತರಹದ ಯಾವ ಸಂದು ಭೇದಕ್ಕೆ ಅವಕಾಶ ವಿರಬಾರದು. ಈ ರೀತಿ ಯಾವುದೇ ಕಾರಣದಿಂದ ನಿಕೃಷ್ಟ ಸ್ಥಿತಿಗೊಳಗಾದವರ ಬಗೆಗೆ ಬಸವಣ್ಣನಲ್ಲಿ ಹುಟ್ಟಿದ ಮಾನವೀಯ ಅಂತಃ ಕರಣವೇ ಸಾಮಾಜಿಕ ಕ್ರಾಂತಿಯಾಗಿ ಪರಿಣಮಿಸುವಂತಾದುದು. ಆತ್ಮೋನ್ನತಿಯೊಂದಿಗೆ ಲೋಕೋನ್ನತಿಯನ್ನು ಸಾಧಿಸುವುದೇ ನಿಜವಾದ ಮಾನವ ಹಿತಚಿಂತಕರು, ಮಹಾಂತರು. ಅಂತರಂಗ ಸಂಸ್ಕಾರದ ಬಗೆಗೆ ಬಹುಶಃ ವಿಶ್ವ ಎಲ್ಲ ಮಹಾತ್ಮರುಗಳು ಪ್ರಯತ್ನಿಸಿದ್ದುಂಟು. ಆದರೆ ಮಾನವ ಬದುಕಿನ ಸರ್ವಮುಖಗಳ ಸಂಸ್ಕಾರದ ಬಗೆಗೆ ಬಸವಣ್ಣನಷ್ಟು ಶ್ರದ್ಧಾಭಕ್ತಿ, ಆಸಕ್ತಿಯಿಂದ ದುಡಿದವರು ವಿರಳವೆಂದೇ ಹೇಳಬೇಕು. ಬಸವಣ್ಣನವರು ತಾನು ಗಳಿಸಿಕೊಂಡ ಅನುಭವವನ್ನು ಸ್ವಾರ್ಜಿತ ಆಸ್ತಿಯನ್ನಾಗಿ ಮಾಡಿಕೊಳ್ಳದೆ, ಎಲ್ಲ ತರಹದ ಮಾನವರಿಗೂ ಹಂಚಿ ಸಂತೋಷಪಟ್ಟದ್ದುಂಟು. ಬಸವಣ್ಣನವರು ಮಾಡಿದ ದಾಸೋಹದಿಂದಾಗಿ ವೈಯಕ್ತಿಕ ದುಡಿಮೆಯಿಂದ ಹಿಡಿದು ಸಾಮಾಜಿಕ ಜೀವನದವರೆಗೆ ಹಾಗೂ ಅಂತಿಮವಾಗಿ ಆಧ್ಯಾತ್ಮಿಕ ಅತ್ಯುನ್ನತ ಸ್ಥಿತಿಯನ್ನು ಹೊಂದುವವರೆಗೂ ಸಿದ್ಧಿ ಸಾಧಿಸಲು ಸಮರ್ಥರಾದರು. ಪ್ರತಿಯೊಬ್ಬ ಮಾನವನಿಗೆ ಅಸಾಧಾರಣ ಶಕ್ತಿಯೊಂದು ದೈವದತ್ತವಾಗಿ ಪ್ರಾಪ್ತವಾಗಿ ಅವನಲ್ಲಿ ಗುಪ್ತನಿಧಿಯಾಗಿ ಅಡಕವಾಗಿರುತ್ತದೆ. ಅದು ಅನನ್ಯ ಸಾಧನೆಯಿಂದ ಗೋಚರಿಸುವಂತಹ ಮತ್ತು ಅದು ನಿರಂತರ ಕ್ರಿಯೆಯಲ್ಲಿರುವಂತಹುದ್ದು. ಕೈಸಾರುವಂತಹುದ್ದು, ಅಲ್ಲದೆ ಪ್ರಯೋಜನಕ್ಕೆ ಬರುವಂತಹುದ್ದು. ಯಾರು ಈ ಅಸಾಧಾರಣ ಶಕ್ತಿಯನ್ನು ಸಾಧನೆಯಿಂದ ಸಕಲ ಜೀವಾತ್ಮರ ಲೇಸಿಗಾಗಿ ಉಪಯೋಗಿಸಿಕೊಳ್ಳುವರೋ, ಅವರಲ್ಲಿ ಒಂದು ಅಪೂರ್ವವಾದ ಆತ್ಮಬಲ ಹುಟ್ಟಿಕೊಳ್ಳುತ್ತದೆ. ಆ ಆತ್ಮಬಲದಿಂದಾಗಿ ಅನನ್ಯ ಕಾರ್ಯಗಳನ್ನು ಸಾಧಿಸಲು ಸಮರ್ಥರಾಗುತ್ತಾರೆ. ಈ ಆತ್ಮಬಲವನ್ನು ತಾನಷ್ಟೇ ಪಡೆದುಕೊಳ್ಳುವುದರಿಂದ ತೃಪ್ತಿಯಾಗದೇ ಅದು ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಸಕಲ ಸ್ತ್ರೀ-ಪುರುಷರಿಗೆ ಪ್ರಾಪ್ತವಾಗುವಂತೆ, ಮುಕ್ತ ಅವಕಾಶ ಕಲ್ಪಿಸಿಕೊಟ್ಟದ್ದು ಬಸವಣ್ಣನವರು ಪಡೆದುಕೊಂಡ ಅಸಾಧಾರಣ ಮಾನವೀಯತೆಗೆ ಹೆಗ್ಗುರುತಾಗಿದೆ.

❋





## ಪರಮದಾಸೋಹಿ ನೀಲಾಂಬಿಕೆ

-ಯು.ಎನ್. ಸಂಗನಾಳಮಠ
ಉಪನ್ಯಾಸಕರು,
ಜ್ಯೋತಿರ್ಲಿಂಗ, ೧ನೇ ತಿರುವು,
ಹೈಸ್ಕೂಲ್ ಬಡಾವಣೆ, ಹೊನ್ನಾಳಿ-೫೭೭೨೧೭.

*ಎನಗೆ ಲಿಂಗವು ನೀವೆ, ಎನಗೆ ಸಂಗವು ನೀವೆ*
*ಎನಗೆ ಪ್ರಾಣವು ನೀವೆ, ಎನಗೆ ಪ್ರಸಾದವು ನೀವೆ*
*ಪ್ರಭೆಯ ಮೂರುತಿ ನೀವೆ ಸಂಗಯ್ಯ ನೀವೆ ಬಸವಯ್ಯ*

ನೀಲಾಂಬಿಕೆಯರ ಸರ್ವಸ್ವ ಬಸವಣ್ಣನವರು ಆಗಿದ್ದರು. ಶಿವಶರಣೆಯರಲ್ಲಿ ಬಹುಪಾಲು ಮಹಿಳೆಯರು ತಮ್ಮ ಇಷ್ಟಲಿಂಗದಲ್ಲಿ ತಮ್ಮ ಪತಿಯರನ್ನು ಸಮೀಕರಿಸಿ ಆರಾಧಿಸಿ, ತಮ್ಮ ಪತಿಯ ಮೂಲಕ ಪರಮಾತ್ಮನನ್ನು ಕಂಡಿದ್ದಾರೆ ಎನ್ನಬಹುದು. ಹಾಗೆ ನೀಲಮ್ಮನವರು ಸಂಗಯ್ಯನಲ್ಲಿ ಬಸವಯ್ಯನನ್ನು, ಬಸವಯ್ಯನಲ್ಲಿ ಸಂಗಯ್ಯನನ್ನು ಕಂಡು ಗುರುತಿಸಿ ಉಭಯರಲ್ಲಿ ಅಭೇದವನ್ನು ಅನುಭವಿಸಿದ ಸಾಧ್ವಿ.

ಬಸವರಾಜ ರಗಳೆ, ಶಿವತತ್ವಚಿಂತಾಮಣಿ, ಗುರುರಾಜ ಚರಿತ್ರೆ, ಸಿಂಗಿರಾಜ ಪುರಾಣ ಕೃತಿಗಳನ್ನು ಆಧರಿಸಿ, ಜಾನಪದ ತ್ರಿಪದಿಗಳನ್ನು ಆಧರಿಸಿ ನೀಲಮ್ಮನವರ ಬಾಲ್ಯದ ಬಗ್ಗೆ ತಿಳಿಯಬಹುದು. ನೀಲಾಂಬಿಕೆ ಬಿಜ್ಜಳನ ದಂಡಾಧಿಪತಿ ಸಿದ್ಧರಸ-ಪದ್ಮಗಂಧಿಯವರ ಮಗಳು. ಬಿಜ್ಜಳನ ತಂದೆ ಪೆರ್ಮಾಡಿ ತೀರಿದಾಗ ಆತನ ಪತ್ನಿ ಸಹಗಮನ ಹೊಂದುತ್ತಾಳೆ. ಇವರಿಗೆ ಕರ್ಣದೇವ ಎಂಬ ಮಗನು ಇದ್ದನು. ತಾಯಿ ಸತಿ ಹೋಗುವಾಗ ತನ್ನ ಮಗನ (ಕೂಸಿನ) ಜವಾಬ್ದಾರಿಯನ್ನು ಪದ್ಮಗಂಧಿಗೆ ವಹಿಸಿದ್ದಳು. ತಾಯಿ ಪದ್ಮಗಂಧಿ ತನ್ನ ಮಗಳು ಮತ್ತು ಕರ್ಣದೇವ ಇಬ್ಬರಿಗೂ ಹಾಲೂಡಿಸಿ ಸಾಕಿ ಬೆಳೆಸಿದಳು. ಹೀಗಾಗಿ ನೀಲಮ್ಮ ಬಿಜ್ಜಳನ ಸಾಕುತಂಗಿ ಆದಳು. ಬಸವಣ್ಣನವರು ಮಂತ್ರಿಯಾದ ಮೇಲೆ ಸಿದ್ಧರಸ-ಪದ್ಮಗಂಧಿ ತೀರಿದ ಮೇಲೆ ನೀಲಾಂಬಿಕೆ ಅರಮನೆಯಲ್ಲಿ ಬೆಳೆದಳು. ಮುಂದೆ ಬಿಜ್ಜಳನ ಅಸ್ಥಾನದಲ್ಲಿ ಪಂಡಿತರಿಂದ ಓದಲಾಗದ ಲಿಪಿ ಓದಿ, ಬಿಜ್ಜಳನಿಗೆ ಅಪಾರ ನಿಧಿ ದೊರಕಿಸಿಕೊಟ್ಟ ಬಸವಣ್ಣನವರ ಅಗಾಧ ಪಾಂಡಿತ್ಯಕ್ಕೆ ಮನಸೋತ ದೊರೆ, ಸಂಬಂಧವನ್ನು ಬಲಪಡಿಸಬೇಕೆಂಬ ದೃಷ್ಟಿಯಿಂದ ತನ್ನ ಸಾಕುತಂಗಿಯನ್ನು ಬಿಜ್ಜಳ ಬಸವಣ್ಣನಿಗೆ ಧಾರೆ ಎರೆದಿರಬೇಕು. ಸ್ವತಃ ಬಸವಣ್ಣನವರೇ ಕ್ಷತ್ರಿಯ ಕುಲದ ಕನ್ಯೆ ಮದುವೆ ಆಗಿ ಅಂತರ ಜಾತಿ ವಿವಾಹಕ್ಕೆ ಪ್ರೋತ್ಸಾಹಿಸಿದರೆನ್ನಬಹುದು.

ಹರಿಹರಕವಿ ಬಸವಣ್ಣನವರ ಪತ್ನಿಯರು ಗಂಗಾಂಬಿಕೆ, ಮಾಯಾದೇವಿಯವರು ಎಂದಿದ್ದಾರೆ. ನೀಲಾಂಬಿಕೆಯನ್ನು ಮಾಯಾದೇವಿ ಎಂದಿರಬಹುದು. 'ಎನ್ನ ಸತಿ ನೀಲಲೋಚನೆ ಪೃಥ್ವಿಗಗ್ಗಳ ಚೆಲುವೆ' ಎಂದು ಬಸವಣ್ಣನವರು ಹೇಳಿರುವುದನ್ನು ಗಮನಿಸಿ, ತಂದೆ-ತಾಯಿಗಳು ಇದ್ದ ಹೆಸರು ಮಾಯಾದೇವಿ ಆಗಿದ್ದು ನೀಲಕಂಗಳ ಸೌಂದರ್ಯವತಿ ಆಗಿದ್ದರಿಂದ ನೀಲಲೋಚನೆ, ನೀಲಾಂಬಿಕೆ, ನೀಲಮ್ಮ ಆಗಿರಬಹುದು.

ಗಂಗಾಂಬಿಕೆಯವರ ವಚನದಂತೆ 'ಅವಳ ಕಂದ ಬಾಲಸಂಗ, ನಿನ್ನ ಕಂದ, ಚೆನ್ನಲಿಂಗ ಎಂದು ಹೇಳಿದರಮ್ಮ ಎನ್ನ ಒಡೆಯರು'. ನೀಲಾಂಬಿಕೆಗೆ ಒಬ್ಬ ಪುತ್ರನಿದ್ದಿರಬಹುದು, ಎಳೆ ವಯಸ್ಸಿನಲ್ಲಿ ವಿಧಿವಶವಾದಂತೆ ತೋರುತ್ತದೆ. ಆಗ ತಮ್ಮನ್ನು ತಾವೇ ಸಂತೈಸಿಕೊಂಡು.

*ಆಗಿಂಗೆ ಮುಯ್ಯಾನದಿರು ಚೇಗಿಂಗೆ ಬೆಂಬೀಳದಿರು*
*ಆಹಾ! ಮನವೆ ಸಂತೈಸಿಕೋ ನಿನ್ನ ನೀವೆ*
*ಆಗೆಂದಡೆ ನಿನ್ನ ವಶವಲ್ಲ ಹೋಗೆಂದಡೆ ನಿನ್ನಿಚ್ಛೆಯಲ್ಲ*
*ಭೋಗಾದಿ ಭೋಗಗಳೆಲ್ಲವು ಸಂಗಯ್ಯನಧೀನವಾಗಿ*

ಜೀವನದಲ್ಲಿ ಜೀವಿಯ ಕೈಲಿ ಏನೂ ಇಲ್ಲ ಎಲ್ಲ ಆಗು ಹೋಗುಗಳು ಶಿವನ ಅಧೀನ. ಸಂಸಾರದಂದುಗವನ್ನು ಮೀರಿ ಮಿತ ಸ್ಥಿತಿಯಲ್ಲಿಯೇ ಆಕೆ ವಚನ ರಚಿಸಿರಬಹುದು.
*'ಆನೆತ್ತಲೀ ಸಂಸಾರವೆತ್ತ; ಆನೆತ್ತಲೀಕಾಯವೆತ್ತ'*
*'ಎಸೆವ ಅಣುಗನ ಸಂಗನ ಹರಿದು ಏಕತ್ರಯ ಬ್ರಹ್ಮಮೂರ್ತಿಯಾದೆಯಲ್ಲಾ'*
ಮರ್ತ್ಯಲೋಕ ಬರಿಯ ಭೋಗ ಭೂಮಿಯಲ್ಲ ಸಾಧನಾ ಕ್ಷೇತ್ರ ಎಂಬ ಅವಳ ವಾಕ್ಯಗಳಿಂದ ಲೌಕಿಕ ಶಿಷ್ಟಾಚಾರವನ್ನು ಕಾಣಬಹುದು. ಇಂಥ ಮೌಲ್ಯಗಳನ್ನು ಅರಗಿಸಿಕೊಂಡು, ಆಂತರಿಕವಾಗಿ ಬೆಳೆಯುತ್ತ ಅನುಭಾವದ ತುದಿಗೇರಿದ ನೀಲಾಂಬಿಕೆ ದಾಂಪತ್ಯದ ಮರ್ಮವನ್ನು ಹೀಗೆ ಸಮೀಕರಿಸಿದ್ದಾಳೆ.

*'ಮಡದಿ ಎನಲಾಗದು ಬಸವಂಗೆ ಎನ್ನನು*
*ಪುರುಷಕುಳವ ಹರಿದು ಬಸವಂಗೆ ಶಿಶುವಾದೆನು*
*ಬಸವನೆನ್ನ ಶಿಶುವಾದನು'*

ಪ್ರಮಥರು ಪುರಾತನರು ಸಾಕ್ಷಿಯಾಗಿ ಸಂಗಯ್ಯನಿಕ್ಕಿದ

ದಿಬ್ಬ ಮೀರದೆ ಬಸವನೊಳಗಾನಡಗಿದೆ 'ಸತಿಪತಿ ಎಂಬ ಅಂಗ ಸುಖ ಹಿಂಗಿ ಲಿಂಗವೆ ಪತಿಯಾದ ಬಳಿಕ ಸಂಸಾರ ಸಂಗವಳಿದ ಮಡದಿ ತಾನಾಗಿ, ಬಸವಣ್ಣನ ವಿಚಾರಪತ್ನಿ ಆದಳು.

ನೀಲಾಂಬಿಕೆಯಲ್ಲಿ ಭಕ್ತಿ ಬೆಳೆಯುತ್ತ ಹೋದಂತೆ ವ್ಯಕ್ತಿತ್ವ ಅರಳಿದಂತೆ ಬಸವಣ್ಣನವರ ಬಗ್ಗೆ ತಮ್ಮ ವಚನಗಳಲ್ಲಿ ಗೌರವಾದರ ತೋರಿದ್ದಾಳೆ. ಪ್ರಭುದೇವ ಬಸವಣ್ಣನೇ ಲಿಂಗ ಎಂದು, ಚೆನ್ನಬಸವಣ್ಣ ಜಂಗಮ ಎಂದು, ಶಂಕರದೇವರು ಪ್ರಸಾದ ಎಂದು ಆದರಿಸಿದಾಗ, ಬಸವಣ್ಣನೇ ಗುರು, ಲಿಂಗ ಜಂಗಮ ಪ್ರಸಾದವೆಂದರಿಯದ ಅನಾಚಾರಿಗಳನ್ನು ತಮಗೆ ತೋರಿಸದಿರಯ್ಯ! ಎಂದು ಹಾಡಿದ್ದಾಳೆ. ತನ್ನ ಆಧ್ಯಾತ್ಮಿಕ ಜೀವನಕ್ಕೆ ಚೈತನ್ಯ ನೀಡಿದ ಬಸವಣ್ಣನವರಿಂದ ನಿಜದ ನೆಲೆಯರಿಯಲು ತನಗೆ ಸಾಧ್ಯವಾಯಿತೆಂದೂ, ತನ್ನಲ್ಲಿ ಎಲ್ಲವ ನೆಲೆಗೊಳಿಸಿದ 'ಬಸವಾ' ಎಂಬ ಮೂರಕ್ಷರವ ಕಂಡು ತಾನು ಪ್ರಾಣಲಿಂಗಿ, ಸಂಬಂಧಿ ಆದೆನೆಂದೂ ಸದ್ಗುರು ಬಸವಯ್ಯನ ಮುಕ್ತಾಂಗನೆ ಎಂದು ಅಭಿಮಾನದಿಂದ ಹೇಳಿದ್ದಾಳೆ. ಪ್ರಸನ್ನ ಮೂರ್ತಿಯಡಗಿದ ಬಸವನ ಇರವ ಕಂಡು ನಾನು ಬದುಕಿದೆ ನಯ್ಯಾ ಎಂದು ವಿನಮ್ರವಾಗಿ ನುಡಿದಿದ್ದಾಳೆ. 'ಮಾಟಕೂಟ ಸಮಯಾಚಾರ ಸದ್ ಭಕ್ತಿಯ ನೆಲೆಯ ನಮ್ಮ ಬಸವಣ್ಣನಲ್ಲದೆ ಮತ್ತಾರೂ ಅರಿಯರು' ಹೀಗೆಂದು ಬಸವಣ್ಣನವರ ವ್ಯಕ್ತಿತ್ವವನ್ನು ಬಣ್ಣಿಸುತ್ತಾಳೆ. ಬಸವಣ್ಣನವರನ್ನು ಈ ಪರಿ ಸ್ತುತಿಸಿದ್ದಾರೆ.

ಭಕ್ತಿ ಫಲವನುಂಡಾತ ನಮ್ಮ ಬಸವಯ್ಯನು  
ಚೆನ್ನಬಸವನೆಂಬ ಪ್ರಸಾದಿಯಿಂ ಪಡೆದು ಅನುಭವ  
ಮಂಟಪವ ಮಾಡಿ ಅನುಭವಮೂರ್ತಿ  
ಯಾದ ಬಸವಯ್ಯನು ಬಸವನ ಮನೆಯ ತೊತ್ತಿನ  
ಮಗಳು ನಿಮ್ಮ ಶರಣ ಬಸವ ನಿರಾಭಾರಿಯಾದ  
ಬಸವ ಕುರುಹಿಲ್ಲದೆ ಮೂರ್ತಿಯಾದ  
ಎಲೆ ಇಲ್ಲದ ವ್ಯಕ್ತವಾದನು ಬಸವ  
ಉಪಮಾತೀತನಾದ ನಿಮ್ಮ ಬಸವಯ್ಯನು.

ನೀಲಮ್ಮ ಒಂದು ವಚನದಲ್ಲಿ ಹೆಣ್ಣಿನ ಬಗ್ಗೆ ಕೀಳರಿಮೆ ಭಾವನೆ ವ್ಯಕ್ತಪಡಿಸಿದ್ದಾಳೆ.

ಏಕೆನ್ನ ಪುಟ್ಟಿಸಿದೆಯ್ಯಾ ಹೆಣ್ಣು ಜನ್ಮದಲ್ಲಿ  
ಪುಣ್ಯವಿಲ್ಲದ ಪಾಪಿಯ ?  
ನಾನು ಇಹಪರಕ್ಕೆ ದೂರಳಯ್ಯಾ  
ಎನ್ನ ನಾನು ಹೆಣ್ಣು ನಾಮವಲ್ಲವಯ್ಯಾ  
ನಾನು ಸಿರಿಯಿದ್ದು ವಸ್ತುವಿನ ವಧುವಾದ ಕಾರಣ  
ಎನಗೆ ಹೆಣ್ಣು ನಾಮವಿಲ್ಲವಯ್ಯಾ?

ವಚನದ ಮೊದಲ ಎರಡು ಸಾಲುಗಳಲ್ಲಿ ಅಂದಿನ ಸಮಾಜ ಮಹಿಳೆಯನ್ನು ಕಾಣುವಸ್ಥಿತಿ ಧ್ವನಿತವಾದರೆ, ಅವಕಾಶ ವಂಚಿತ ತಿರಸ್ಕೃತ ಸ್ಥಿತಿಯಿಂದ ಮುಕ್ತಳಾಗಿ ಮಹಿಳೆ ಧಾರ್ಮಿಕ ಸಾಮಾಜಿಕ ಆಧ್ಯಾತ್ಮಿಕ ಅವಕಾಶ ಪಡೆಯು ವಂತಾದದು ಶರಣರ ಔದಾರ್ಯದಿಂದ, ಬಸವನ ವಧು ವಾಗಿ ತನ್ನ ಬದುಕಿನಲ್ಲಿ ಸ್ಥಿತ್ಯಂತರ ಉಂಟಾಯಿತು ಎಂದಿದ್ದಾಳೆ.

ನೀಲಾಂಬಿಕೆ ಮಹಾಮನೆಯ ಹೊಣೆ ಹೊತ್ತು, ಅನೇಕ ಶರಣರ ಪೋಷಕಳಾಗಿದ್ದನ್ನು ಜನಪದ ಕವಿಗಳು ಈ ರೀತಿ ಹೊಗಳಿದ್ದಾರೆ. 'ಬಸವಣ್ಣನಂಥ ಭಕ್ತರಿಲ್ಲ ನೀಲಮ್ಮನಂಥ ಶರಣೆಯಿಲ್ಲ. ನೀಲಮ್ಮನನ್ನು ಪರಮದಾಸೋಹಿ ಎಂದು ಕರೆದಿದ್ದಾರೆ. ಮಹಾಮನೆಯಲ್ಲಿ ನಡೆಯುವ ಅಸಂಖ್ಯ ಜಂಗಮರ ದಾಸೋಹಕ್ಕಾಗಿ ಪ್ರಸಾದ ವಿನಿಯೋಗ ಮಾಡುವ ಜಂಗಮರ ಇಷ್ಟಾರ್ಥ ಪೂರೈಸುವ ಮಹಾಮಾಣಿಕ್ಯ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡಿದ್ದಳು. ಬೇಡಿದವರಿಗೆ ಬೇಡಿದುದನ್ನು ಎಡೆಮಾಡುವ ನೀಲಮ್ಮನವರು ಸಾಕ್ಷಾತ್ ಅನ್ನಪೂರ್ಣೇಶ್ವರಿಯಾಗಿದ್ದರು.

ಮಹಾಮನೆಯ ದಾಸೋಹಕಾರ್ಯದ ನೇತೃತ್ವವನ್ನು ವಹಿಸಿಕೊಂಡಿದ್ದ ನೀಲಾಂಬಿಕೆಗೆ ಅನುಭವ ಮಂಟಪದ ಶರಣ-ಶರಣೆಯರ ನೇರ ಸಂಪರ್ಕ ಬಂದಿರುವುದು ಸಹಜ. ಅನೇಕ ಜನ ಶರಣ-ಶರಣೆಯರನ್ನು ಸ್ಮರಿಸಿದ ಆಕೆ ಅವರ ಸ್ತುತಿಗೂ ಪಾತ್ರವಾಗಿದ್ದಾಳೆ. ಅಕ್ಕನಾಗಮ್ಮನನ್ನು 'ಎನಗೆ ಹಾಲೂಟವನ್ನಿಕ್ಕಿದ ತಾಯಿ ಎನಗೆ ಪರಿಣಾಮವ ತೋರುವ ತಾಯೆ' ಎಂದು ಮಾತೃಸ್ವರೂಪದಲ್ಲಿ ಕಂಡಿದ್ದಾಳೆ. ಸಿದ್ಧರಾಮರು 'ನೀಲಮ್ಮನೆಂಬ ಸುಖವಾಸಿ ಮೂರ್ತಿ ಕಪಿಲ ಸಿದ್ಧ ಮಲ್ಲಿಕಾರ್ಜುನಯ್ಯ' ಎಂದಿದ್ದಾರೆ. ಶರಣರೆಂದರೆ ನೀಲಮ್ಮನಿಗೆ ಎಲ್ಲಿಲ್ಲದ ಅಭಿಮಾನ. 'ಆವಾವ ಕಾಲ ದಲ್ಲಿಯೂ ಎನಗೆ ನಿಮ್ಮವರ ಗತಿ ಮತಿಗಳಯ್ಯ ಎಂದಿದ್ದಾರೆ.

ಎನಗೆ ಹಿತಕಾರಿಗಳಾಗಿ ಇದ್ದವರೀ ಶರಣರು  
ಎನಗೆ ಪ್ರಭೆದೋರಿ ಇದ್ದವರೀ ಶರಣರು  
ಎನಗೆ ಸಂಗ ನಿಸ್ಸಂಗ ಕೊಟ್ಟವರೀ ಶರಣರು  
ಆ ಶರಣ ಪಥವ ನೋಡ ಹೋದರೆ ಅನು ನೋಡದ  
ಒಲವು ಒಲವೆ ಆಯಿತಯ್ಯ ಸಂಗಯ್ಯ ಸಂಗಯ್ಯ





ಬರಹೇಳಿದರೆ ಬಸವಯ್ಯನು ಇಲ್ಲಿ ತಾನಿಲ್ಲವೆ ಸಂಗಯ್ಯನು ಅಲ್ಲಿ ಇಲ್ಲಿ ಎಂಬ ಸಂದೇಹ ಸುಜ್ಞಾನಿಗಳಿಗುಂಟೆ? ಪರಿಣಾಮಮೂರ್ತಿ ಬಸವನ ರೂಪ ಎನ್ನ ಕರಸ್ಥಲದಲ್ಲಿ ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇತಕಯ್ಯಾ ಬಸವಾ? ಎಂದು ಕೇಳುತ್ತಾಳೆ.

ಈ ಮಾತಿನಲ್ಲಿ ಉನ್ನತ ಆಧ್ಯಾತ್ಮದ ನಿಲವು ಕಂಡು ಬರುತ್ತದೆ. ಕಲ್ಯಾಣದ ಕ್ರಾಂತಿಯನ್ನು ಕಣ್ಣಾರೆ ಕಂಡು ಅನುಭವಿಸಿದ ಧೀರ ಮಹಿಳೆ ನೀಲಾಂಬಿಕೆ. ಬಿಜ್ಜಳನ ತಂಗಿಗೆ ಮಾತ್ರ ಈ ಕೆಚ್ಚಿದೆ.

ನೀಲಾಂಬಿಕೆಯ ಐಕ್ಯದ ಬಗ್ಗೆ ಎರಡು ಅಭಿಪ್ರಾಯ ಗಳಿವೆ. ಒಂದು ಕೂಡಲಸಂಗಮದಲ್ಲಿ ಬಸವಣ್ಣನವರು ಐಕ್ಯ ರಾದ ಸುದ್ದಿ ತಿಳಿದು ಅಧೀರಳಾಗುತ್ತಾಳೆ. ಆಗ ತಮ್ಮ ದುಃಖ ವನ್ನು ಹಲವು ವಿಧದಲ್ಲಿ ಪ್ರಕಟಪಡಿಸುತ್ತಾಳೆ.

ಅಟ್ಟಡವಿಯಲಿ ಬಿಟ್ಟು ಹೋದಿರಿ  
ಬಸವನೈಕ್ಯ ಬಯಲಿಲ್ಲದ ಬಯಲು  
ಬಸವಾ ಬಸವಾ ಎಂಬ ಶಬ್ದ ನಿಶ್ಶಬ್ದವಾಯಿತು.  
ಎನಗಿನ್ನೇನು ಎಮ್ಮಯ್ಯನೈಕ್ಯವನೈದಿದ ಬಳಿಕ

ನಂತರ ನೀಲಾಂಬಿಕೆ ತಮ್ಮ ಕರದ ಇಷ್ಟಲಿಂಗದಲ್ಲಿ ಐಕ್ಯವಾದ ಸಂದರ್ಭವು ವಚನಗಳಲ್ಲಿ ಕಂಡುಬರುತ್ತದೆ.

'ಎಲೆಯಯ್ಯ ಉರಿಯುಂಡಿತ್ತೆನ್ನಂಗವ  
ಎಲೆಯಯ್ಯ ಕರಸ್ಥಲ ಬಯಲಾಯಿತ್ತೆನಗೆ  
ಕರಸ್ಥಲ ಮನಸ್ಥಲವಾಯಿತ್ತು  
ಸಂಗಯ್ಯ ಹೋದ ಬಸವನತ್ತ  
ನಾನಡಗಿದೆ ನಾಡಗಿದೆ ನಿನ್ನತ್ತ'  
ಸಂಗನಬಸವಣ್ಣನೆಂದ ನಿರೂಪಕೆ  
ಹಿಂಗದೆ ಕರವೆತ್ತಿ ಮುಗಿಯುತಲಿ  
ಸಂಗಮನಾಥನೆ ಈತನೆಂದು ಎ  
ನ್ನಂಗೈಯ್ಯಲಿಂಗದೊಳಡಗುವೆನು.

ಎರಡನೆಯ ಅಭಿಪ್ರಾಯದ ಪ್ರಕಾರ ಹಡಪದ ಅಪ್ಪಣ್ಣ ನವರ ಆಗ್ರಹಕ್ಕೆ ಬಸವಣ್ಣನವರನ್ನು ಸೇರಲಿ ನೀಲಾಂಬಿಕೆ ಸಂಗಮದ ಕಡೆಗೆ ಹೊರಟಳೆಂದೂ ತಂಗಡಿಗೆ ಸಮೀಪ ಬರುತ್ತಲೇ ಬಸವಣ್ಣ ಐಕ್ಯರಾದ ಸುದ್ದಿ ಕೇಳಿ ಅಲ್ಲಿಯೇ ಪೂಜೆ ಮಾಡುತ್ತ ಲಿಂಗದೊಳಗಾದಳು ಎಂದು ಹೇಳುತ್ತಾರೆ. ಇದಕ್ಕೆ ಗುರುತಾಗಿ ನೀಲಾಂಬಿಕೆ ಗುಡಿ ಇದೆ ತಂಗಿ ಅಡಗಿದ್ದ ರಿಂದ 'ತಂಗಡಗಿ' ಎಂಬ ಹೆಸರು ಬಂದಿತೆಂದು ಡಾ॥ ಹಳಕಟ್ಟಿಯವರು ಅಭಿಪ್ರಾಯ ಪಟ್ಟಿದ್ದಾರೆ.

ಎಂದು ಶರಣರ ಮೇಲಿನ ತನ್ನ ಅಭಿಮಾನವನ್ನು ವ್ಯಕ್ತಪಡಿಸಿದ್ದಾಳೆ.

ಕಾಮದ ಹಂಗಿಗನಲ್ಲ ಮೋಹದ ಶರಣ, ಇಚ್ಛೆಯವನಲ್ಲ  
ಶರಣ ಉಭಯದ ಸಂಗದವನಲ್ಲ ಶರಣ

ಹೀಗೆ ಶರಣನ ಗುಣಧರ್ಮವನ್ನು ಆಚಾರ ವಿಚಾರಗಳನ್ನು ವಿವರಿಸಿದ್ದಾರೆ.

'ಬಸವಪ್ರಿಯ ಕೂಡಲಸಂಗಮದೇವ', 'ಸಂಗಯ್ಯಾ' 'ಸಂಗನಗುರುಬಸವ' ಎಂಬ ಅಂಕಿತದೊಂದಿಗೆ 125 ವಚನ ಗಳನ್ನು ರಚಿಸಿದ್ದಾಳೆ. ಒಂದು ಕಾಲಜ್ಞಾನ ಕೃತಿಯೂ ದೊರೆತಿದೆ. ಪ್ರಸಾದ ಸಂಪಾದನೆ ಕೃತಿ ಸಹ ಅವಳದೆಂದು ಚರಿತ್ರೆಕಾರರು ಹೇಳುತ್ತಾರೆ. ವಚನಗಳಲ್ಲಿ ವೀರಶೈವ ಧರ್ಮ ತತ್ವಗಳಾದ ಗುರು-ಲಿಂಗ-ಜಂಗಮ-ಪ್ರಸಾದ ಪ್ರಸ್ತಾಪ, ಶಿವಯೋಗ ಮಹಿಮೆ ಕಂಡು ಬರುತ್ತದೆ.

ಮದುವೆಯಾದ ಹೊಸತರಲ್ಲಿ ಒಂದು ಘಟನೆ ನಡೆಯುತ್ತದೆ. ಇನ್ನೂ ಒಡವೆ ಮೇಲಿನ ವ್ಯಾಮೋಹ ಹೋಗಿ ದ್ದಿಲ್ಲ, ಹೀಗಿರಲು ಒಬ್ಬ ಕಳ್ಳ ಜಂಗಮ ವೇಷಧಾರಿಯಾಗಿ ಮಧ್ಯರಾತ್ರಿ ಬಸವಣ್ಣನ ಮನೆ ಪ್ರವೇಶಿಸುತ್ತಾನೆ. ಮಲಗಿ ನಿದ್ರಿಸುತ್ತಿದ್ದ ನೀಲಮ್ಮನ ಆಭರಣಗಳನ್ನು ಸುಲಿದು ಕಿವಿ ಯೋಲೆಗೆ ಕೈಹಾಕಿದಾಗ ಎಚ್ಚರವಾಗುತ್ತದೆ. ಆಗ ನೀಲಾಂಬಿಕೆ ಕೂಗಿದಾಗ ಬಸವಣ್ಣನವರು ಎಚ್ಚೆತ್ತು ಎಲೆಲೆ ಪಾತಕಿ! ಬಿಡು ಬಿಡೋಲೆಯಂ ಕಲಹವೇಕೆ ? ಅಮ್ಮನ ಕೈಗಳ್ಗಳುರುವವು' ಎನ್ನುತ್ತ ಆ ಓಲೆಯನ್ನು ತಾವೇ ಬಿಚ್ಚಿ ಆ ಕಳ್ಳನಿಗೆ ಕೊಡುತ್ತಾರೆ. ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದಡೆ ಕೂಡಲಸಂಗಮ ದೇವನಲ್ಲದೆ ಆರೂ ಇಲ್ಲ' ಎಂದಿದ್ದಾರೆ. ವಚನ ಒಂದರಲ್ಲಿ ಇದರಿಂದ ಬಸವಣ್ಣನವರು ನೀಲಾಂಬಿಕೆಯ ಮನದಲ್ಲಿದ್ದ ಆಭರಣಗಳ ಮೇಲಿನ ಮೋಹ ವನ್ನು ವಿವೇಕದಿಂದ ತೆಗೆದಿದ್ದಾರೆ. ಪತಿಗೆ ತಕ್ಕ ಸತಿ ಆದಳು ನೀಲಮ್ಮ.

ಕಲ್ಯಾಣದಲ್ಲಿ ಕ್ರಾಂತಿಯಾಗಿ ಶರಣರೆಲ್ಲ ಹಿಂಸೆಗೊಳ ಗಾದಾಗ ತಪ್ಪಿಸಿ ಸಂಗಮಕ್ಕೆ ಬಂದ ಬಸವಣ್ಣನವರು ನೀಲಾಂಬಿಕೆಯನ್ನು ಕರೆತರುವಂತೆ ಹಡಪದ ಅಪ್ಪಣ್ಣನನ್ನು ಕಳುಹಿಸುತ್ತಾರೆ. ಪತಿ ತಮಗೆ ಹೇಳದೇ ಹೋಗಿದ್ದಕ್ಕೆ ತಮ್ಮ ಮನದಳಲನ್ನು ಲಿಂಗಪೂಜೆಯಲ್ಲಿ ತೊಡಗಿದಾಗ, ಅವರ ಕರದ ಇಷ್ಟಲಿಂಗದಲ್ಲಿಯೇ ಬಸವನ ದರ್ಶನ, ಸಂಗಮನಾಥನ ದರ್ಶನ ಒಡನೆಯೇ ಆಗುವುದು ಮುದದಿಂದ ಮನಸ್ಸು ಅರಳುತ್ತದೆ. ಹಡಪದ ಅಪ್ಪಣ್ಣ ಬಂದಾಗ ಅಲ್ಲಿ ಎನ್ನ

*

## ನನ್ನ ಸಣ್ಣ ತಪ್ಪಿನಿಂದಾಗಿ ಅನ್ಯನಿಗೊಲಿದ ಶ್ರೀ ಶ್ರೀಗಳವರ ಕೃಪೆ

-ಕೆ.ಜಿ. ರಂಗಯ್ಯ, ನಿವೃತ್ತ ಮುಖ್ಯಶಿಕ್ಷಕರು, ಕೆಂಕೆರೆಪಾಳ್ಯ, ಸುಗ್ಗನಹಳ್ಳಿ ಅಂಚೆ, ಮಾಗಡಿ ತಾ॥, ರಾಮನಗರ ಜಿಲ್ಲೆ.

ನಾವು ಚಿಕ್ಕವರಿದ್ದಾಗ ಮಠದ ಜಾತ್ರೆಗೆ ಐದಾರು ಸಿನಿಮಾ ಟೆಂಟ್‌ಗಳು ಬರುತ್ತಿದ್ದವು. ಹಿಂದಿನ ಸುಮಾರು ೪೦-೪೫ ವರ್ಷಗಳಿಂದಲೂ ನಿರಂತರವಾಗಿ ಪ್ರತಿವರ್ಷದ ಜಾತ್ರೆಯನ್ನು ನೋಡುತ್ತಾ ಬಂದಿರುವ ನನಗೆ ಹಾಗೂ ನನ್ನ ಜೊತೆಯ ಅನೇಕ ಗೆಳೆಯರಿಗೆ ಅಂದಿನ ದಿನಗಳ ಜಾತ್ರೆಯ ವೈಭವ ಸಂಭ್ರಮ ಮತ್ತು ಸೊಗಡು ಇಂದಿಲ್ಲ ದಿರುವುದು ನಿಜಕ್ಕೂ ಮನಸ್ಸಿಗೆ ಬೇಸರು ತರುವ ಸಂಗತಿ ಯಾಗಿದೆ. ಇದಕ್ಕೆ ಕಾರಣ ಒಂದಲ್ಲ ಹಲವಾರು. ಜಾತ್ರೆಯ ಸಂದರ್ಭದಲ್ಲಿ ವಾರಾಂತ್ಯದ ದಿನಗಳಲ್ಲಿ ಟೆಂಟ್‌ನವರಿಗೆ ಕಲೆಕ್ಷನ್ ಕಮ್ಮಿಯಾಗುತ್ತಿದ್ದುದು ಸಹಜ. ಇದಕ್ಕೆ ಕಾರಣ 'ಎತ್ತಿನ ಪರಿಷೆ ಕಿತ್ತ ನಂತರ ಎತ್ತಣ ಜಾತ್ರೆ?' ಎಂಬುದು ಜನಸಂದಣಿ ಕಡಿಮೆಯಾದ ಕೊನೆಯ ೨-೩ ದಿನಗಳಲ್ಲಿ ಮಠದ ವಿದ್ಯಾರ್ಥಿಗಳನ್ನು ೧ನೇ ಅಥವಾ ೨ನೇ ಷೋಗಳಿಗೆ ಬ್ಯಾಚುಗಳಲ್ಲಿ ಪುಕ್ಕಟೆಯಾಗಿ ಸಿನಿಮಾ ನೋಡಲು ಬಿಡುತ್ತಿದ್ದುದು ರೂಢಿಯಲ್ಲಿತ್ತು. ಇದಕ್ಕಾಗಿ ಮಠದ ಆಗಿನ ಮೇನೇಜರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದ ವಿದ್ವಾನ್ ಶ್ರೀ ಕೆ.ಎಸ್. ಶಿವನಂಜಯ್ಯನವರಿಂದ ಶಿಫಾರಸು ಪತ್ರ ಪಡೆಯಬೇಕಾಗುತ್ತಿತ್ತು. ಈ ಒಂದು ಆಚರಣೆ ಶ್ರೀ ಶ್ರೀಗಳವರ ಗಮನಕ್ಕೆ ಬಾರದಂತೆ ನಡೆಯುತ್ತಿತ್ತೆಂಬುದು ನನ್ನ ಅನಿಸಿಕೆ. ಏಕೆಂದರೆ ವಿದ್ಯಾರ್ಥಿಗಳು ಸಿನಿಮಾ ನೋಡುವುದೆಂಬುದು ಶ್ರೀ ಶ್ರೀಗಳವರ ಕಟ್ಟುನಿಟ್ಟಾದ ನಿಲುವಿಗೆ ವಿರುದ್ಧವಾದುದಾಗಿದೆ.

ಹೀಗೊಂದು ರಾತ್ರಿ ಹಿಂದಿನ ಛತ್ರದ ವಿದ್ಯಾರ್ಥಿಗಳಿಗೆ ಪುಕ್ಕಟೆ ಸಿನಿಮಾ ನೋಡುವ ಯೋಗ ಒದಗಿ ಬಂದಿತ್ತು. ಕೊಠಡಿಯ ಮಾನಿಟರ್ ಆಗಿದ್ದ ನನಗೆ ಸುಮಾರು 30 ಮಂದಿ ವಿದ್ಯಾರ್ಥಿಗಳ ಪಟ್ಟಿಯ ಮೇಲೆ ಮೇನೇಜರ್‌ರವರ ಸಹಿ ಹಾಗೂ ಪ್ರತ್ಯೇಕ ಶಿಫಾರಸ್ಸು ಪತ್ರ ಎರಡೂ ಸಿಕ್ಕಿದವು. ಕಲ್ಯಾಣಿಯ ಪಕ್ಕದಲ್ಲಿದ್ದ ಟೆಂಟಿನಲ್ಲಿ 'ಬೇಡರ ಕಣ್ಣಪ್ಪ' ಸಿನಿಮಾ ನಡೆಯುತ್ತಿತ್ತು. ಅದು ಒಂದನೇ ಷೋ. ನಾನು ಗೇಟಿನಲ್ಲಿ ನಿಂತು, ಚೀಟಿಯಲ್ಲಿದ್ದವರ ಹೆಸರನ್ನು ಕೂಗಿ ಅವರನ್ನು ಗುರುತಿಸಿ ಒಳಗೆ ಕಳಿಸಿದ ನಂತರ ಕೊನೆಯಲ್ಲಿ ಹೋಗ ಬೇಕಾಗಿತ್ತು. ಜಾತ್ರೆಗೆ ಬಂದಿದ್ದ ನಮ್ಮೂರಿನ ಬಂಧುಗಳ ಒತ್ತಾಯಕ್ಕೆ ಮಣಿದು ನಾನು ಎರಡು ದಿನ ಮುಂಚಿತವಾಗಿಯೇ ಅದೇ ಸಿನಿಮಾವನ್ನು ನೋಡಿಯಾಗಿತ್ತು. ಅದರಿಂದಾಗಿ ನನ್ನ ಬದಲಿಗೆ ಮುಂದಿನ ಛತ್ರದಲ್ಲಿದ್ದ ನನ್ನ ಆಪ್ತ ಗೆಳೆಯ ವೆಂಕಟರಾಮುವನ್ನು ಸಿನಿಮಾ ನೋಡಲು ಕಳಿಸಿದೆನು. ನಾನು ಕಾಶೀ ಬಾವಿಯ ಬಳಿಯ ಬೈರನಾಯ್ಕನಹಳ್ಳಿಯ ನಮ್ಮ ಬಂಧುಗಳು ನಿರ್ವಹಿಸುತ್ತಿದ್ದ ಕೊಪ್ಪಲಿನಲ್ಲಿ ಕಾರ್ಯ ನಿರ್ವಹಿಸಲು ಹೋದೆನು. ಅಂದು ಒಂದು ಅಚಾತುರ್ಯ ಘಟನೆ ಜರುಗಿ ಟೆಂಟ್ ಬಳಿ ಸ್ವಲ್ಪ ಗಲಾಟೆ ಸಂಭವಿಸಿತು. ಅದೇನೆಂದರೆ ಮಠದ ಕೆಲವು ದೊಡ್ಡ ಹುಡುಗರ ಗುಂಪು ಒಳಕ್ಕೆ ಬಿಡುವಂತೆ ಒತ್ತಾಯಿಸಿ ಅಲ್ಲಿನ ಸಿಬ್ಬಂದಿಯ ನಿರ್ಬಂಧವನ್ನು ಅಲಕ್ಷಿಸಿ ಒಳಕ್ಕೆ ನುಗ್ಗಿದ್ದರು. ಆಗ ಮಾಲೀಕನು ಮಠದ ಮೇನೇಜರ್ ರವರನ್ನು ಕಾಣಲೆಂದು ಬರುತ್ತಿದ್ದಾಗ ಗದ್ದುಗೆಯ ಹಿಂದಿನ ಕೊಪ್ಪಲಿನ ಕಡೆ ಬರುತ್ತಿದ್ದ ಶ್ರೀ ಶ್ರೀಗಳವರನ್ನು ನೋಡಿ ಅವರಿಗೆ ಅಡ್ಡಬಿದ್ದು ಆ ಬಗ್ಗೆ ದೂರು ಸಲ್ಲಿಸಿದನು. ಜೊತೆಯಲ್ಲಿದ್ದ ಮಠದ ಪರಿಚಾರಕ ಹನುಮಯ್ಯನನ್ನು ಕಳಿಸಿ ಛಡಿ ತರಿಸಿಕೊಂಡು ಶ್ರೀ ಶ್ರೀಗಳವರು ಸ್ಥಳಕ್ಕೆ ಆಗಮಿಸಿ ಒಳನುಗ್ಗಿದ್ದ ಮಠದ ವಿದ್ಯಾರ್ಥಿಗಳನ್ನು ಹೊರಕ್ಕೆ ಕರೆಸಿ ಸಿಟ್ಟಿನಿಂದ ಒಂದೊಂದು ಬಿಟ್ಟರು. ಅಧಿಕೃತ ಪರವಾನಗಿ ಹೊಂದಿದ್ದ ಹಾಗೂ ಪರವಾನಗಿ ಇದ್ದು ಒಳಹೋಗಿದ್ದ ಎಲ್ಲರಿಗೂ ಛಡಿಸೇವೆ ಆಯಿತು.

ಆಪ್ತ ಗೆಳೆಯ ವೆಂಕಟರಾಮು ಕೊಪ್ಪಲಿಗೆ ಬಂದು ಈ ವಿಷಯವನ್ನು ತಿಳಿಸಿದಾಗ ಶಿಕ್ಷೆಯಿಂದ ಪಾರಾಗಿದ್ದ ಕ್ಕಾಗಿ ನಾನು ಬೀಗಿದ್ದನ್ನು ಕಂಡ ಕೊಪ್ಪಲಿನ ಹಿರಿಯಜ್ಜ ನನ್ನ ಬಂಧು ಶ್ರೀ ಕೋಡಪ್ಪನವರು ಹೇಳಿದ ಮಾತು ನನಗೆ ಛಡಿ ಏಟಿಗಿಂತಲೂ ಅಧಿಕ ನೋವನ್ನುಂಟು ಮಾಡಿತ್ತೆನ್ನುವುದು ಸತ್ಯ. ಅವರು ಹೇಳಿದ್ದೇನೆಂದರೆ 'ಸ್ವಾಮಿಗಳವರ ಕೈಯಿಂದ ಏಟು ತಿನ್ನುವುದೆಂದರೆ ಏಳು ಜನ್ಮದಲ್ಲಿ ಪುಣ್ಯಮಾಡಿ ಬಂದಿರಬೇಕು. ಅವರ ಛಡಿಯ ಸ್ಪರ್ಶ ಮೈಮೇಲಿನ ಏಳುಕೋಟಿ ದೇವ್ವಗಳನ್ನು ಓಡಿಸ ಬಲ್ಲದು. ಇಂದು ನಿನಗೆ ಸಿಗದಿದ್ದ ಪುಣ್ಯ ನಿನ್ನ ಸ್ನೇಹಿತನಿಗೆ ಸಿಕ್ಕಿದೆ. ನೀನು ದುರದೃಷ್ಟಶಾಲಿ'.

ಅಂದಿನಿಂದ ನಾನು ಬಹಳ ದಿನಗಳವರೆಗೆ ಏನಾದರೊಂದು ತಪ್ಪೆಸಗಿ ಶ್ರೀ ಶ್ರೀಗಳವರ ಕೃಪೆಗೆ ಪಾತ್ರನಾಗ ಬೇಕೆಂಬ ಸಂಕಲ್ಪವನ್ನು ಮನಸ್ಸಿನಲ್ಲಿ ಮಾಡಿದ್ದೆನೆಂಬುದು ಸುಳ್ಳಲ್ಲ. *





## ಗುರುಪೂರ್ಣಿಮೆ

-ಶಕುಂತಲಾ ಎಸ್. ಮಠ,
ಹೊನ್ನಾಳಿ, ದಾವಣಗೆರೆ ಜಿಲ್ಲೆ.

*ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ*
*ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರುವೇ ನಮಃ ॥*

'ಶಿಷ್ಯನ ಅಜ್ಞಾನವೆಂಬ ಕಣ್ಣುಬೇನೆಯನ್ನು ಜ್ಞಾನವೆಂಬ ಅಂಜನದ ಕಡ್ಡಿಯಿಂದ ಗುಣಪಡಿಸಿ ಅವನ ಕೀರ್ತಿ ಎಲ್ಲೆಡೆ ಹರಡುವಂತೆ ಮಾಡಿದ ಶ್ರೀಗುರುವಿಗೆ ವಂದನೆ' ಗುರು ಶಬ್ದ ಉಪಾಧ್ಯಾಯ, ಪುರೋಹಿತ, ಹಿರಿಯ, ಬೃಹಸ್ಪತಿ, ಮಠದ ಅಧಿಪತಿ ಎಂಬ ಅರ್ಥವನ್ನು ಕೊಡುತ್ತದೆ. ಆಚಾರ್ಯ ದೇವೋಭವ ಎನ್ನುತ್ತದೆ ವೇದ. ನಮ್ಮ ಜೀವನವನ್ನು ಸಾರ್ಥಕಗೊಳಿಸಿದ ಗುರುವಿಗೆ ವಂದನೆಯನ್ನು ಸಲ್ಲಿಸಿ ಗೌರವದಿಂದ ಸ್ಮರಿಸುವ ದಿನ ಗುರುಪೂರ್ಣಿಮೆ.

ಆಷಾಢ ಶುದ್ಧ ಪೂರ್ಣಿಮೆಯನ್ನು ಗುರುಪೂರ್ಣಿಮೆ, ವ್ಯಾಸ ಪೂರ್ಣಿಮೆ, ಜನಪದರಲ್ಲಿ ಕಡ್ಲಿಗಡಬ ಹುಣ್ಣಿಮೆ ಎಂದು ಕರೆಯುತ್ತಾರೆ.

ಜನಪದಕವಿ ಸರ್ವಜ್ಞ-
ತಂದೆಗೂ ಗುರುವಿಗೂ ಒಂದು ಅಂತರವುಂಟು.
*ತಂದೆ ತೋರುವನು ಸದ್ಗುರುವ*
*ಗುರುರಾಯ ಬಂಧನವ ಕಳೆವ ಸರ್ವಜ್ಞ ॥*
*ಸಾರಾಯದ ನಿಜವ ಆರು ತೋರಿರಿದಡೇನು*
*ಸಾರಾಯದ ನಿಜವ ತೋರುವ ಗುರುವು ತಾ*
*ನಾರಾದಡೇನು ? ಸರ್ವಜ್ಞ*

*ಗುರುವಾತನೆ ಉಪದೇಶ ಗುರುವಚನ ಪರಭಕ್ತಿ*
*ಗುರುವಚನ ಮೋಕ್ಷದಾಯಕ ಪದವದು, ಗುರುವಚನ*
*ಪರಮಾರ್ಥವಯ್ಯ ಸರ್ವಜ್ಞ*

ಎಂದು ಗುರುವಿನ, ಗುರೂಪದೇಶದ ಮಹತ್ವ ಸಾರಿದ್ದಾನೆ.
*'ಗುರುದೇವೋ ಮಹಾದೇವೋ ಗುರುದೇವಸ್ಸದಾಶಿವಃ ।*
*ಗುರುಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ॥*

ಹೀಗೆ ಭಾರತದ ಸಂಸ್ಕೃತಿ ಪರಂಪರೆಯಲ್ಲಿ ಗುರುವನ್ನು ಪರಬ್ರಹ್ಮ ಸ್ಥಾನಕ್ಕೆ ಎತ್ತರಿಸಿದ್ದಾರೆ. ಪುರಂದರದಾಸರು 'ಗುರುವಿಗೆ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂದರೆ ಬಸವಣ್ಣನವರು 'ಶಿವಪಥ ಅರಿಯುವ ಮುನ್ನ ಗುರುಪಥ ಅರಿ' ಎನ್ನುತ್ತಾರೆ. ಯಾರು ಅಜ್ಞಾನದಿಂದ ಜ್ಞಾನದ ಮಾರ್ಗಕ್ಕೆ ನಮ್ಮನ್ನು ಒಯ್ಯುವರೋ ಅಥವಾ ದಾರಿ ತಪ್ಪಿದಾಗ ಸರಿದಾರಿ ತೋರುವರೋ ಅವರೇ ಗುರು ಮಾತೆ ನಮ್ಮ ಮೊದಲ ಗುರು. ಅಕ್ಷರ ಕಲಿಸಿದಾತ ಗುರು, ಜೀವನ ಪದ್ಧತಿಯನ್ನು ಬದಲಿಸಿದಾತ ಗುರು. ಧರ್ಮ ಬೋಧನೆ ಮಾಡುವ ಮಠದ ಮುಖ್ಯಸ್ಥ ಗುರು. ಗುರು-ಶಿಷ್ಯ ಪರಂಪರೆಯಲ್ಲಿ ಜಗತ್ತಿನ ಆದಿಗುರು ಸಾಕ್ರೆಟಿಸ್-ಪ್ಲೇಟೋ, ಅರಿಸ್ಟಾಟಲ್-ಅಲೆಕ್ಸಾಂಡರ್ ಆದರೆ, ದ್ರೋಣಾಚಾರ್ಯ, ಏಕಲವ್ಯ, ರಾಮಕೃಷ್ಣ ಪರಮಹಂಸ-ವಿವೇಕಾನಂದ ಉತ್ತಮ ಉದಾಹರಣೆ.

ಸಿದ್ಧಾಂತ ಶಿಖಾಮಣಿಯಲ್ಲಿ ಗುರುವನ್ನುಳಿದು ಲಿಂಗ-ಜಂಗಮವಿಲ್ಲ, ಹರ-ಗುರುಗಳ ಅಭೇದವನ್ನು ಉಭಯಸ್ಥಲದಲ್ಲಿ ವಿವರಿಸಲಾಗಿದೆ.

*"ಏವಮಾಚಾರ ಸಂಯುಕ್ತೋ ವೀರಶೈವೋ ಮಹಾವ್ರತಿ*
*ಪೂಜಯೇತ್ಪರಯಾ ಭಕ್ತಾ ಗುರುಲಿಂಗಂಚ ಸಂತತಂ"*

ಧರ್ಮಾಚರಣೆಗಳಿಂದ ಕೂಡಿದ ವೀರಶೈವನು ಗುರುಲಿಂಗವನ್ನು ಪೂಜಿಸಬೇಕು. ಏಕೆಂದರೆ ಗುರು-ಹರ ಅಭಿನ್ನರು. ಪ್ರತ್ಯಕ್ಷ ಗುರುವನ್ನು ಗೌರವಿಸಿದರೆ ಅಗೋಚರ ಹರನನ್ನು ಆರಾಧಿಸಿದಂತೆ.

ಮೂರು ಪ್ರಕಾರದ ಗುರುವನ್ನು ಸಿದ್ಧಾಂತ ಶಿಖಾಮಣಿಯಲ್ಲಿ ಪ್ರಸ್ತಾಪಿಸಲಾಗಿದೆ. ೧) ದೀಕ್ಷಾಗುರು ೨) ಶಿಕ್ಷಾಗುರು ೩) ಪ್ರಜ್ಞಾಗುರು.

'ಧೀಯತೆ ಪರಮಜ್ಞಾನಂ ಕ್ಷೀಯತೇ ಪಾಶಬಂಧನಂ
ಯಯಾ ದೀಕ್ಷೇತಿ ಸಾ ತಸ್ಯಾಂ ಗುರುರ್ದೀಕ್ಷಾ ಗುರುಸ್ಮೃತಃ॥

ಪರಮಜ್ಞಾನವನಿತ್ತು ಪಾಶಬಂಧನವನ್ನು ಬಿಡಿಸುವವನೇ ದೀಕ್ಷಾಗುರು.

'ದೀಕ್ಷಾಗುರು ರಸೌ ಶಿಕ್ಷಾಹೇತುಃ ಶಿಷ್ಯಸ್ಯ ಬೋಧಕಃ
ಪ್ರಶ್ನೋತ್ತರ ಪ್ರವಕ್ತಾ ಚ ಶಿಕ್ಷಾಗುರುರಿತೀರ್ಯತೇ

ದೀಕ್ಷಾಗುರುವೇ ಶಿಷ್ಯನಿಗೆ ಬೋಧಕನಾಗಿ ಶಿಕ್ಷಣಕ್ಕೆ ಕಾರಣನಾಗಿ ಶಿಕ್ಷಾಗುರು ಆಗುವನು.

'ಉಪದೇಷ್ಟೋಪದೇಶ್ಯಾನಾಂ ಸಂಶಯಚ್ಛೇದ ಕಾರಕಃ
ಸಮ್ಯಕ್ ಜ್ಞಾನಪ್ರದಃ ಸಾಕ್ಷಾದೇಷ ಜ್ಞಾನಗುರು ಸ್ಮೃತಃ ॥

ಉಪದೇಶಿಸಲು ಉಪಯುಕ್ತವಾದವುಗಳನ್ನು ಉಪದೇಶಿಸುವಾತನು ಸಂಶಯಗಳನ್ನು ಸಂಹರಿಸುವಾತನು.

ಸೊಗಸಾದ ಶಿವಜ್ಞಾನಪ್ರದಾತನು ಸಾಕ್ಷಾತ್ತಾಗಿ ಜ್ಞಾನಗುರು 'ನ ಗುರೋರಾಧಿಕಂ ತತ್ತ್ವಂ ನ ಗುರೋರಧಿಕಂ ತಪಃ ತತ್ತ್ವಂ ಜ್ಞಾನಾತ್ ಪರಂ ನಾಸ್ತಿ ತಸ್ಮೈ ಶ್ರೀ ಗುರುವೇನಮಃ॥

ಅಂದರೆ ಗುರುವಿಗಿಂತ ಮಿಗಿಲಾದ ತತ್ವ, ತಪಸ್ಸು ಬೇರೊಂದಿಲ್ಲ ಎಂದು ಸಾರಿದರು. ಈ ರೀತಿ ಗುರುವಿಗೆ ಅಭಿನಂದನೆ ಸಲ್ಲಿಸುವುದು ಗುರುಪೂರ್ಣಿಮೆ.

*ನ ಚತುರ್ವದನೋ ಬ್ರಹ್ಮ*
*ದ್ವಿಬಾಹುರಪರೋ ಹರಿಃ*
*ಅಭಾಲಲೋಚನಃ ಶಂಭುಃ*
*ಭಗವಾನ್ ಬಾದರಾಯಣಃ ॥*

ಭಗವಾನ್ ವ್ಯಾಸರು ನಾಲ್ಕು ಮೊಗವಿಲ್ಲದ ಬ್ರಹ್ಮ ಎರಡು ಕೈಗಳಿರುವ ವಿಷ್ಣು, ಹಣೆಯಲ್ಲಿ ನೇತ್ರವಿಲ್ಲದ ಶಿವ ಎನ್ನುತ್ತದೆ ಈ ಸ್ತೋತ್ರ. ಲೋಕಗುರು ವ್ಯಾಸ. ಮಹಾಭಾರತ ಎಂಬ ಎಣ್ಣೆಯಿಂದ ಬೆಳಗುವ ಜ್ಞಾನದೀಪವನ್ನು ಹೊತ್ತಿಸಿದ ಆಚಂದ್ರಾರ್ಕ ಕೀರ್ತಿ ವ್ಯಾಸರು ವೇದಗಳನ್ನು ವಿಂಗಡಿಸಿದ್ದರಿಂದ ವೇದವ್ಯಾಸರು; ಪರಾಶರ ಋಷಿಯ ಮಗ ಪಾರಾಶರ್ಯ; ದ್ವೀಪದಲ್ಲಿ ಜನಿಸಿದ್ದರಿಂದ ದ್ವೈಪಾಯನಲ್ ಬದರಿಕ್ಷೇತ್ರದಲ್ಲಿ ತಪಗೈದ ಕಾರಣ ಬಾದರಾಯಣ ಎಂದು ಕರೆಯಲ್ಪಟ್ಟಿದ್ದಾರೆ. ಇವರ ಸಂದೇಶ 'ಯತೋಧರ್ಮ ತತೋ ಜಯಃ;.

ಈ ಲೋಕಗುರುವನ್ನು ಸ್ಮರಿಸುವ ದಿನ ವ್ಯಾಸಪೂರ್ಣಿಮೆ. ಈ ದಿನದಂದು ವ್ಯಾಸಪೂಜೆ ಮಾಡಿ ಗುರುವರೇಣ್ಯರು, ಸನ್ಯಾಸಿಗಳು, ಮಠಾಧಿಪತಿಗಳು, ಚಾತುರ್ಮಾಸ್ಯ ವ್ರತ' ಕೈಗೊಳ್ಳುತ್ತಾರೆ. ಆಷಾಢದಿಂದ ಕಾರ್ತಿಕದವರೆಗೆ ಎಲ್ಲೂ ಸಂಚರಿಸದೇ ಒಂದೇ ಸ್ಥಳದಲ್ಲಿದ್ದು ಲೋಕ ಕಲ್ಯಾಣಾರ್ಥವಾಗಿ ಭಗವಚ್ಚಿಂತನೆ ಮಾಡುತ್ತಾರೆ. ವ್ಯಾಸರ ಸಂಕೇತದಲ್ಲಿ ಸದ್ಗುರುವನ್ನು ಸ್ಮರಿಸುವ ಸುದಿನ ವ್ಯಾಸಪೂರ್ಣಿಮೆ.

ಮಣ್ಣೆತ್ತಿನ ಅಮಾವಾಸ್ಯೆಯ ನಂತರ ಬರುವ ಈ ಹುಣ್ಣಿಮೆಯನ್ನು ಜನಪದರು. ಕಡ್ಲಿಗಡಬ ಹುಣ್ಣಿಮೆ ಎನ್ನುವರು. ಬಹುಶಃ ಕಡಲೆ ಸಮೃದ್ಧವಾಗಿ ಬೆಳೆದು ಬಂದಿರುವುದರಿಂದ ಅದರ ಸಿಹಿಕಡಬನ್ನು ತಯಾರಿಸಿ ವಿಶೇಷ ಅಡಿಗೆ ಮಾಡಿ ಎಡೆ ಮಾಡುವ ಪದ್ಧತಿ ಇರಬಹುದು. ಮಳೆಯ ವಾತಾವರಣಕ್ಕೆ ತಕ್ಕುದಾದ ಆರೋಗ್ಯ ಸೃಷ್ಟಿದಾಯಕವಾಗಿ ಪರಿಣಮಿಸುವುದು. ಇದಕ್ಕೆ ಯಾವ ಪೌರಾಣಿಕ ಹಿನ್ನಲೆ ಇಲ್ಲ. ಜನಪದರ ಸಂಪ್ರದಾಯ ದಿಂದ ಬೆಳೆದು ಬಂದುದಾಗಿದೆ. ಇತ್ತೀಚೆಗೆ ಹುಣ್ಣಿಮೆಗಳು ತಮ್ಮ ಮಹತ್ವವನ್ನು ಕಳೆದುಕೊಳ್ಳುತ್ತಿಲಿವೆ.

*

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

**'ಸಿದ್ಧಗಂಗಾ'** ಮುನ್ನಡೆಗೆ ಇರುವ ಆರ್ಥಿಕ ಪರಿಸ್ಥಿತಿಯನ್ನು ನಿಮ್ಮ ಗಮನಕ್ಕೆ ನಿವೇದಿಸಿಕೊಳ್ಳಲಾಗುತ್ತಿದೆ. ಈ ಸಮಸ್ಯೆಯನ್ನು ಮನಗಂಡು ಆಜೀವ ಸದಸ್ಯರು ಸ್ಪಂದಿಸಿ ಹೆಚ್ಚುವರಿ ಚಂದಾ ೫೦೦ ರೂ./೪೦೦ ರೂ. ಉದಾರತೆಯಿಂದ ಸಂದಾಯ ಮಾಡುತ್ತಿದ್ದಾರೆ. ಅವರಿಗೆ ಶ್ರೀಮಠದ ಪರವಾಗಿ ಧನ್ಯವಾದಗಳು.

ಸಂದಾಯ ಮಾಡದೆ ಇರುವವರಲ್ಲಿ ನಮ್ರ ವಿನಂತಿ ಏನೆಂದರೆ ಪ್ರಸ್ತುತವಿರುವ ಆಜೀವ ಚಂದಾ ೧೦೦೦/- ರೂ.ಗೆ. ಸರಿಹೊಂದುವಂತೆ ಉಳಿಕೆ ೫೦೦/- ರೂ./ ೪೦೦/- ರೂ. ಶೀಘ್ರವಾಗಿ ಸಂದಾಯ ಮಾಡಿ 'ಸಿದ್ಧಗಂಗಾ' ನಿರಂತರವಾಗಿ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ಕೋರುತ್ತೇವೆ.

**ತಮ್ಮ ವಿಳಾಸದಲ್ಲಿರುವ LM ನಂಬರ್ ಸೂಚಿಸಿ** ಬಾಕಿ ಆಜೀವ ಚಂದಾವನ್ನು ನಗದು/ ಎಂ.ಒ./ ಚೆಕ್/ ಡಿ.ಡಿ. ಮೂಲಕ **'ಸಿದ್ಧಗಂಗಾ'** ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ದಯಮಾಡಿ ಕಳಿಸಲು ವಿನಂತಿಸಿಕೊಳ್ಳಲಾಗಿದೆ.

ನಿಮ್ಮ ವಿಳಾಸ ಬದಲಾದಾಗ ನಿಮಗೆ ಕೊಟ್ಟಿರುವ ಆಜೀವ ಸದಸ್ಯತ್ವದ ನಂಬರನ್ನು ತಪ್ಪದೆ ತಿಳಿಸಿರಿ. ಇದರಿಂದ ನೇರವಾಗಿ ಪತ್ರಿಕೆ ನಿಮಗೆ ತಲುಪಲು ಸಾಧ್ಯವಾಗುತ್ತದೆ. ಆಗಾಗ್ಗೆ ಬದಲಾಗುವ ನಿಮ್ಮ ಹೊಸ ವಿಳಾಸವನ್ನು ಪತ್ರಿಕಾ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

**ಪ್ರಕಾಶಕರು**
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.





## ವಚನಗಳಲ್ಲಿ ವೈಜ್ಞಾನಿಕ ಅಂಶಗಳು

-ಮುಂದುವರೆದ ಲೇಖನ

-ಡಾ॥ ವ್ಹಿ.ವ್ಹಿ. ಬಾಗಲಕೋಟಿ, ವಿಶ್ವಚೇತನ ಪ್ರಕಾಶನ, ಕಲ್ಯಾಣ್ ಹೌಸಿಂಗ ಕಾಲೋನಿ, ಗೋಕಾಕ-೫೯೧೩೦೭.

**ಭಕ್ತಿಯ ಮೂಲ ಜ್ಞಾನ; ಜ್ಞಾನ ಭಕ್ತಿಗಳು ಭಾನು ಕಿರಣಗಳಂತೆ :**

*ಭಾನುವಿನಂತಿಪ್ಪುದು ಜ್ಞಾನ,*
*ಭಾನುಕಿರಣದಂತಿಪ್ಪುದು ಭಕ್ತಿ,*
*ಭಾನುವನುಳಿದು ಕಿರಣಗಳಿಲ್ಲ*
*ಕಿರಣಗಳನುಳಿದು ಭಾನುವಿಲ್ಲ*
*ಜ್ಞಾನವಿಲ್ಲದ ಭಕ್ತಿ ಭಕ್ತಿಯಿಲ್ಲದ ಜ್ಞಾನವಂತಿಪ್ಪುದು*
*ಚೆನ್ನಮಲ್ಲಿಕಾರ್ಜುನಾ ?*

ಎಂಬೀ ಅಕ್ಕಮಹಾದೇವಿಯವರ ವಚನದಲ್ಲಿ ಜ್ಞಾನ ಮತ್ತು ಭಕ್ತಿಗಳನ್ನು ಭಾನು ಮತ್ತು ಭಾನುಕಿರಣಗಳಿಗೆ ಹೋಲಿಸಿದ್ದಾರೆ. ಭಾನುವು ಶಕ್ತಿಯ ಉತ್ಪಾದನಾ ಮೂಲ. ಶಕ್ತಿಯ ಮೂಲದಿಂದ ಕಿರಣಗಳ ಮುಖಾಂತರ ಶಕ್ತಿಯು ಪ್ರಸರಣಗೊಳ್ಳುತ್ತದೆ. ಮೂಲವಿದ್ದಾಗ ಮಾತ್ರ ಪ್ರಸರಣ ಕಾರ್ಯ ಮಾಡುತ್ತಿರುವ ಕಿರಣಗಳು; ಮೂಲವೇ ಇಲ್ಲದಿದ್ದರೆ, ಕಿರಣಗಳೆಲ್ಲಿಂದ ಬರಬೇಕು? ಹಾಗೆ ಭಕ್ತಿಗೆ ಜ್ಞಾನವೇ ಮೂಲ, ಜ್ಞಾನವಿಲ್ಲದಿದ್ದರೆ ಭಕ್ತಿಗೆ ಅರ್ಥವಿಲ್ಲ.

ದೇವಭಕ್ತರ ನಡುವಿನ ಸಂಬಂಧದಲ್ಲಿ ಜ್ಞಾನ, ಭಕ್ತಿಯ ಕ್ರಿಯೆಗಳಾಡುವ ಪಾತ್ರ ಮಹತ್ವದ್ದು. ದೇವನ ಬಗ್ಗೆ ಸರಿಯಾದ ನಿಖರವಾದ ಜ್ಞಾನ ಭಕ್ತನಿಗಿದ್ದು, ದೇವನಲ್ಲಿಯ ಶಕ್ತಿಯನ್ನು ತಿಳಿದು ಶ್ರದ್ಧೆ ಪ್ರೀತಿಯ ಮನೋವೃತ್ತಿಗೆ ಭಕ್ತಿ ಎಂದಿದ್ದಾರೆ. ಅಕ್ಕನವರು. ಇಲ್ಲಿ ಭಕ್ತನಿಗೆ ಜ್ಞಾನವಿದ್ದು, ಆರಾಧಿಸುತ್ತಿರಬೇಕು. ದೇವರ ಬಗ್ಗೆ ಅಜ್ಞಾನವಿದ್ದು, ಬರೇ ಆರಾಧಿಸುವ ಪ್ರೀತಿ ಆತುರವಿದ್ದು ಏನು ಪ್ರಯೋಜನ? ಎಂದಿದ್ದಾರೆ, ಭಕ್ತಿ ಇದ್ದು, ಜ್ಞಾನವಿಲ್ಲದಿದ್ದರೆ ನಿಷ್ಪ್ರಯೋಜಕ, ಹಾಗೆಯೇ ಜ್ಞಾನವಿದ್ದು, ಭಕ್ತಿ ಇಲ್ಲವಾದರೂ, ಅಪ್ರಯೋಜಕ.

ಅದೇ ರೀತಿ ಗುರುಶಿಷ್ಯರ ನಡುವೆ ಇರುವ ಸಂಬಂಧವೂ ಕೂಡ. ಗುರುವಿನಲ್ಲಿ ಜ್ಞಾನವಿದೆ. ಅದನ್ನು ವಿತರಿಸುವ ಆತುರವಿದೆ. ಭಕ್ತನು ಆ ಜ್ಞಾನವನ್ನು ತಿಳಿದುಕೊಳ್ಳುವಂಥವನಾಗಿದ್ದು, ಸ್ವೀಕರಿಸುವ ಪ್ರೀತಿ ಆತುರಗಳಿದ್ದರೆ, ಅಂದರೆ ಭಕ್ತಿಯಿದ್ದರೆ, ಫಲಪ್ರದವಾದದ್ದು ಒಂದು ಇದ್ದು ಇನ್ನೊಂದಿಲ್ಲವಾದರೆ, ಪರಿಣಾಮ ಶೂನ್ಯ ಜ್ಞಾನವನ್ನು ಪಡೆದು, ಸ್ವೀಕರಿಸುವ ಪ್ರೀತಿ ಇದ್ದಲ್ಲಿ, ಪ್ರಸರಣಗೊಳ್ಳುತ್ತಿರುವ ಜ್ಞಾನವಿದ್ದರೆ, ಎರಡೂ ಫಲಪ್ರದವಾಗಿ, ಒಳ್ಳೆಯ ಪರಿಣಾಮಕಾರಿಯಾಗಿರುತ್ತದೆ. ಈ ಆಧ್ಯಾತ್ಮಿಕ ವಿಷಯವನ್ನು ವಿಶದೀಕರಿಸಲು ಭಾನು ಮತ್ತು ಭಾನುವಿನಿಂದ ಪ್ರಸರಣಗೊಳ್ಳುತ್ತಿರುವ ಕಿರಣಗಳ ಉಪಮೆಯ ವಿಜ್ಞಾನದಿಂದ ಆಯ್ದುಕೊಂಡದ್ದು ಇಲ್ಲಿ ವಿಜ್ಞಾನ ಮತ್ತು ಧರ್ಮಗಳ ಪರಸ್ಪರ ಪೂರಕ ಸಂಯೋಜನೆ ಇದೆ.

ಇಲ್ಲಿ, ಭಾನುವಿನಂತಿಪ್ಪುದು ಜ್ಞಾನ, ಭಾನುಕಿರಣಗಳಂತಿಪ್ಪುದು ಭಕ್ತಿ, ಎಂದಷ್ಟೇ ಅಲ್ಲದೇ, ಭಾನುವಿನುಳಿದು ಕಿರಣಗಳಿಲ್ಲ, ಭಾನುವು ಎಂದರೆ ಸೂರ್ಯನು, ತನ್ನಲ್ಲಿ ಉತ್ಪನ್ನವಾದ ಶಕ್ತಿಯನ್ನು ಕಿರಣಗಳ ಮುಖಾಂತರ ವಿಕಿರಣಗೊಳಿಸುತ್ತಲು ಅವಕಾಶದಲ್ಲಿ ಪ್ರಸರಣಗೊಳಿಸುತ್ತಾನೆ.

ವಿಜ್ಞಾನದಲ್ಲಿ, ಸೂರ್ಯನಿಂದ ಉತ್ಪಾದಿತವಾದ ಅಲೆಗಳ ಸರಣಿಗಳು ಪ್ರಕಾಶ ವೇಗದಿಂದ ಹೊರಗೆ ಚಲಿಸುವದರಿಂದ ಇಲ್ಲವೆ, ಶಕ್ತಿಯ ಪ್ರೋಟಾನ್‌ಗಳು ಅದೇ ವೇಗದಿಂದ ಹೊರಗೆ ಚಲಿಸಿ, ಕಿರಣಗಳುದ್ಭವಕ್ಕೆ ಭಾನುವೇ ಕಾರಣವೆಂದಾಯಿತು. ಅಂದರೆ ಭಾನುವಿದ್ದರೆ ಕಿರಣ, ಇಲ್ಲದಿದ್ದರೆ ಕಿರಣಗಳಿಲ್ಲ ಎಂಬ ಸತ್ಯ ಸರ್ವವಿಧಿತ. ಇನ್ನು, ಭಾನುಕಿರಣಗಳಿದ್ದರೆ ಭಾನುವಿದ್ದೇ ಇದೆ, ಕಿರಣಗಳಿಲ್ಲದಿದ್ದರೆ ಭಾನುವೂ ಇಲ್ಲ, ಎಂಬುದೂ ತರ್ಕಬದ್ಧ.

ಅಕ್ಕನವರು ಭಾನು-ಕಿರಣ, ಉಪಮೆಯಿಂದ ಭಕ್ತಿಯುಂಟಾಗುವುದು ಜ್ಞಾನದಿಂದ ಎಂದಿದ್ದಾರೆ. ಸರಿಯಾದ ಜ್ಞಾನವಿಲ್ಲದಿದ್ದರೆ ಭಕ್ತಿಯು ನಿರ್ಮಾಣವಾಗುವುದಿಲ್ಲ ಎಂಬುದು, ಶರಣೆಯ ಇಂಗಿತಾರ್ಥ.

ಶರಣ/ಶರಣೆಯರು ವಚನಗಳನ್ನು ರಚಿಸಿದರು. ವಚನಗಳಲ್ಲಿ ಜ್ಞಾನವಿದೆ, ಭಕ್ತಿಯಂತೂ ಇದ್ದೇ ಇದೆ. ಅವು ಭಕ್ತಿಯಿಂದ ರಚಿತವಾದವು. ಆದ್ದರಿಂದ ವಚನಗಳ ರಚನೆಯಲ್ಲು ಜ್ಞಾನ ಭಕ್ತಿಗಳ ಸಂಯೋಜನೆ ಇದೆ ಎನ್ನಬಹುದು. ಜ್ಞಾನವು ಭಕ್ತಿಯ ಪ್ರಚೋದನೆಗೆ ಎಡೆಮಾಡಿದಂತೆ, ಭಕ್ತಿಯು ಜ್ಞಾನದ ಉದ್ಭವಕ್ಕೂ, ಅದರ ವಿತರಣಕ್ಕೂ ಮೂಲವಾಗಿರುವುದು ಸಹಜ. ಕಾರಣ ಭಾನು-ಭಾನುಕಿರಣಗಳ ಉಪಮೆ ಸೂಕ್ತವಾಗಿದ್ದು, ಇವು ಜ್ಞಾನ-ಭಕ್ತಿಗಳು ಭಾನು-ಕಿರಣಗಳ ಸಂಬಂಧವನ್ನೇ ಹೊಂದಿವೆ.

ಹನುಮಂತನ ಹೃದಯದಲ್ಲಿಯ ರಾಮಭಕ್ತಿಗೆ ಮೂಲ ಕಾರಣವಾದದ್ದು ರಾಮನಲ್ಲಿ ಹನುಮಂತನು ಕಂಡುಕೊಂಡ

ಸದ್ಗುಣಗಳ ಪರಿಜ್ಞಾನವೇ. ಶ್ರೀರಾಮನಲ್ಲಿಯ ನ್ಯಾಯಪರತೆ, ಪ್ರಜಾಹಿತ ರಕ್ಷಣೆ, ಸರಿಸಮಾನತಾಭಾವ ಧಾರ್ಮಿಕತೆ ಇವುಗಳೊಂದಿಗೆ ಅವನಲ್ಲಿದ್ದ ಶೌರ್ಯ. ಇವುಗಳ ಜ್ಞಾನವು ಹನುಮಂತನಲ್ಲಿ ರಾಮಭಕ್ತಿಯನ್ನು ಹುಟ್ಟಿಸಿದವು. ಹೀಗೆ ಜ್ಞಾನವೇ ಭಕ್ತಿಗೆ ಪ್ರಚೋದಕ ಶಕ್ತಿಯಾಯಿತು.

ಆರ್ಕಿಮಿಡೀಸನು ನೀರಿನ ತೊಟ್ಟಿಯಿಂದ ಜಿಗಿದೆದ್ದು ಯುರೇಕಾ(ಹೊಳೆಯಿತು ಹೊಳೆಯಿತು) ಎಂಬ ಉದ್ಗಾರ ದೊಂದಿಗೆ ಧಾವಿಸುವುದಕ್ಕೆ, ಅವನಿಗೆ ಹೊಳೆದ, 'ನೀರಿನಲ್ಲಿ ಮುಳುಗಿಸಿದ ವಸ್ತುವಿನ ತೂಕವು ಆ ವಸ್ತುವಿನಿಂದ ಹೊರ ಚೆಲ್ಲಿದ ನೀರಿನ ತೂಕದಷ್ಟು ಕಡಿಮೆಯಾಗುತ್ತಿದೆ, ಎಂಬ ಆರ್ಕಿಮಿಡೀಸನ್ ಸಿದ್ಧಾಂತ'ವೇ ಕಾರಣ.

ಸಿದ್ಧಾಂತದ ಜ್ಞಾನವು ಉಂಟಾಗುವ ಮೊದಲು ಆತನ ಮನದಲ್ಲಿ ಅದನ್ನು ಕಂಡು ಹಿಡಿಯಬೇಕೆಂಬ ತೀವ್ರಾಸಕ್ತಿಯು ಇಲ್ಲವೇ ಅನ್ವೇಷಣೆಯಲ್ಲಿಯ ಭಕ್ತಿಯಿತ್ತು. ಆ ಭಕ್ತಿಯೇ ಜ್ಞಾನಕ್ಕೆ ಮೂಲ. ಮುಂದೆ ಹೊಳೆದ ಜ್ಞಾನವನ್ನು ಅಭಿವ್ಯಕ್ತ ಗೊಳಿಸಿ ಪ್ರಸರಣಗೊಳಿಸಬೇಕೆಂಬ ಆಸಕ್ತಿ ಅಥವಾ ಭಕ್ತಿಗೆ ಕಾರಣವಾಯಿತು. ಹೀಗಾಗಿ ಇಲ್ಲಿ ಭಕ್ತಿ–ಜ್ಞಾನ–ಭಕ್ತಿಗಳ ಪರಸ್ಪರಾವಲಂಬನವಿದೆ. ಅವು ಅನ್ಯೋನ್ಯವೂ ಎಂದಾಯಿತು. ಜ್ಞಾನವಿಲ್ಲದ ಭಕ್ತಿಯು ಗುರಿಯಿಲ್ಲದ ಚಲನೆಯಂತೆ, ಭಕ್ತಿ ಯಿಲ್ಲದ ಜ್ಞಾನ ಪದವಿ ಪಡೆದು ಸ್ತಬ್ದನಿದ್ದ ಸ್ನಾತಕನಂತೆ.

ಶಿಕ್ಷಕರು ಇಲ್ಲವೇ ಗುರುಗಳು ತಮ್ಮಲ್ಲಿಯ ಜ್ಞಾನವನ್ನು ಶಿಷ್ಯರಿಗೆ ಧಾರೆ ಎರೆಯುತ್ತಾರೆ. ಅವರು ತಾವು ಜ್ಞಾನವನ್ನು ಪಡೆಯುವಾಗ, ಆಸಕ್ತಿ ಇಲ್ಲವೇ ಪ್ರೀತಿ ಅಥವಾ ಭಕ್ತಿಯಿಂದ ಗಳಿಸಿರುತ್ತಾರೆ. ಅರ್ಜಿತ ಜ್ಞಾನವನ್ನು ತನ್ನ ಕಾಯಕದಲ್ಲಿಯ ಶ್ರದ್ಧೆ ಅಥವಾ ಭಕ್ತಿಯು ಶಿಷ್ಯರಿಗೆ ಧಾರೆ ಎರೆಯುವಂತೆ ಮಾಡುತ್ತದೆ. ಇಲ್ಲಿಯೂ, ಜ್ಞಾನ ಭಕ್ತಿ ಸಂಯೋಜನೆಯು ಕಾಣ ಸಿಗುತ್ತದೆ.

ಈ ಸಂದರ್ಭದಲ್ಲಿ ಅಕ್ಕನವರ ಇನ್ನೊಂದು ವಚನ ಇರುವುದಿಂತು,

*ಜ್ಞಾನದ ಕಾರಣಾಂಗವೆ ಭಕ್ತಿಯು,*
*ಭಕ್ತಿಯ ಮಹಾಕಾರಣಾಂಗವೆ ಜ್ಞಾನವು.*
*ಭಕ್ತಿಜ್ಞಾನವೆಂಬುದು ಕಾಕಾಕ್ಷಿಯಂತೆ.*
*ಭಕ್ತಿಜ್ಞಾನವೆಂಬುದು ಎನ್ನ ಮೋಹದ*
*ಚೆನ್ನಮಲ್ಲಿಕಾರ್ಜುನಾ ನಿಮ್ಮಂತೆ*

ನಮ್ಮ ವಿಶ್ಲೇಷಣೆಯನ್ನು ಈ ವಚನವು ದೃಢೀಕರಿಸುತ್ತದೆ. ಹನುಮಂತನಲ್ಲಿ ಹುಟ್ಟಿದ ರಾಮಭಕ್ತಿಗೆ, ರಾಮನ ಸದ್ಗುಣಗಳ ಜ್ಞಾನವೇ ಕಾರಣ. ಆರ್ಕಿಮಿಡೀಸನಿಗೆ ಜ್ಞಾನೋದಯವಾದ ದ್ದಕ್ಕೆ ಕಾರಣ, ಅವನಲ್ಲಿದ್ದ ಸಂಶೋಧಿಸಬೇಕೆಂದಿದ್ದ ತೀವ್ರಾಸಕ್ತಿ. ಇಲ್ಲವೇ ಅನ್ವೇಷಣೆಯ ಮೇಲಿನ ಭಕ್ತಿಯೇ ಕಾರಣ.

ಭಕ್ತಿ–ಜ್ಞಾನವೆಂಬುದು ಕಾಕಾಕ್ಷಿಯಂತೆ ಎಂದೂ ಹೇಳಿದ್ದಾರೆ. ಅಕ್ಕನವರು ಕಾಗೆಯು ಕಣ್ಣಿನ ಗುಡ್ಡೆಯನ್ನು ಎರಡೂ ಕಡೆಗೆ ಹೊರಳಿಸಿ ಎರಡೂ ದೃಶ್ಯಗಳನ್ನು ಏಕಾಕ್ಷ ದಿಂದ ಕಾಣುತಿದೆ ಎಂಬ ನಂಬುಗೆಯಂತೆ, ಭಕ್ತಿ ಜ್ಞಾನಗಳು ಅನ್ಯೋನ್ಯವಾಗಿವೆ ಎಂಬುದು ಅಕ್ಕನವರ ಹೇಳಿಕೆ.

ಕವಿಗೆ, ಸಂಶೋಧಕರಿಗೆ, ಕವಿತೆ ಅಥವಾ ಸಂಶೋಧನೆಗೆ ಇಲ್ಲವೇ ಜ್ಞಾನೋದಯಕ್ಕೆ, ಅನುಕ್ರಮವಾಗಿ, ಅನುಭವ ಹಾಗೂ ಆಸಕ್ತಿಗಳು ಮೊದಲು ಬೇಕು. ಇವುಗಳೇ ಭಕ್ತಿ ಯಂತಿದ್ದು ಜ್ಞಾನೋದಯಕ್ಕೆ ಕಾರಣವಾಗಿ ಕೃತಿ ಇಲ್ಲವೆ ಸಂಶೋಧನೆಯನ್ನು ಅಭಿವ್ಯಕ್ತಿಗೊಳಿಸಬೇಕೆಂಬ ಭಕ್ತಿಗೂ ಮೂಲವಾಗುತ್ತದೆ. ಅಕ್ಕನವರು ಭಕ್ತಿ ಮತ್ತು ಜ್ಞಾನ ಈ ಭಾವಗಳನ್ನು ಹಾಗೂ ಇವುಗಳ ನಡುವಿನ ಸಂಬಂಧವನ್ನು ಸ್ಪಷ್ಟೀಕರಿಸಲು, ವಿಜ್ಞಾನದಲ್ಲಿ ಅಭ್ಯಸಿಸುವ ಭಾನು ಮತ್ತು ಕಿರಣಗಳ ಉಪಮೆಯನ್ನು ಕೊಟ್ಟು ಧರ್ಮ ವಿಜ್ಞಾನಿಗಳ ಸಂಯೋಜನೆ ಮಾಡಿದ್ದಾರೆನ್ನಬಹುದಲ್ಲವೇ?

*

## ಸೋಮೇಶ್ವರ ಶತಕ

*ಸುಡು ಸೂಪಂ ಘೃತಮಿಲ್ಲದೂಟವ ಪರಾನ್ನಾಪೇಕ್ಷೆ*
*ಯಾಜಿಹ್ವೆಯಂ ।*
*ಸುಡು ದಾರಿದ್ರ್ಯದ ಬಾಳ್ಕೆಯಂ ಕಲಹ ಕೋಪಂ*
*ಮಾಳ್ಪ ಸಂಗಾತಿಯಂ ॥*
*ಸುಡು ತಾಂಬೂಲವಿಹೀನ ವಕ್ತ್ರವ ಪರಸ್ತ್ರೀ*
*ನೋಡುವಾ ಕಣ್ಗಳಂ ।*
*ನುಡಿದುಂ ತಪ್ಪುವ ರಾಜನಂ ಹರಹರಾ*
*ಶ್ರೀ ಚೆನ್ನಸೋಮೇಶ್ವರಾ ॥*

ತುಪ್ಪ, ತೊವ್ವೆ ಇವುಗಳಿಲ್ಲದ ಊಟವನ್ನೂ, ಇತರರ ಮನೆಯ ಊಟವನ್ನೇ ಯಾವಾಗಲೂ ಬಯಸುತ್ತಿರುವ ನಾಲಗೆಯನ್ನೂ, ಬಡತನದ ಜೀವನವನ್ನೂ, ಕೋಪಿಸಿ ಕೊಳ್ಳುತ್ತಲೂ, ಜಗಳವಾಡುತ್ತಲೂ ಇರುವ ಹೆಂಡತಿ ಯನ್ನೂ, ತಾಂಬೂಲ ಹಾಕಿಕೊಳ್ಳದಿರುವ ಬಾಯಿ ಯನ್ನೂ, ಪರಸ್ತ್ರೀಯರನ್ನು ನೋಡುವ ಕಣ್ಣನ್ನೂ, ಆಡಿದ ಮಾತಿಗೆ ತಪ್ಪುವ ದೊರೆಯನ್ನೂ ಅತಿನಿಕೃಷ್ಟವೆಂದು ಭಾವಿಸತಕ್ಕದ್ದು.





# ಶರಣ ಸಾಹಿತ್ಯದ ಪ್ರಸ್ತುತತೆ

–ಡಾ॥ ರಾಜಶೇಖರ ಇಚ್ಚಂಗಿ
'ಚೈತ್ರ' ವಿವೇಕಾನಂದನಗರ, ಹುಕ್ಕೇರಿ.

'ಶರಣ' ಎಂಬ ಶಬ್ದಕ್ಕೆ ಸಿದ್ಧ, ಮಹಂತ, ಅನುಭಾವಿ, ದಾರ್ಶನಿಕ ಎಂಬ ಅರ್ಥಗಳಿವೆ. ವ್ಯಕ್ತಿ ವಿಕಾಸದ ಪರಿಪೂರ್ಣ ಸ್ಥಿತಿಯೇ ಶರಣ. ಕಲ್ಲುಮಠದ ಪ್ರಭುದೇವನು ತನ್ನ 'ಲಿಂಗ ಲೀಲಾ ವಿಲಾಸಚಾರಿತ್ರ' ದಲ್ಲಿ ವಚನಗಳು ಶರಣರು ನಡೆದು ನುಡಿದ ಮಾತುಗಳು ಎಂದಿದ್ದಾರೆ. ಶರಣ ಸಾಹಿತ್ಯ ಕೇವಲ ವೀರಶೈವರು ಬರೆದುದು ಎಂಬ ಕಾರಣಕ್ಕಾಗಿ ಅಲ್ಲ, ಅದರಲ್ಲಿ ಚಿರಂತನ ಮೌಲ್ಯಗಳಿವೆ' ಎಂಬ ಕಾರಣಕ್ಕಾಗಿ ಇಂದಿಗೂ ಅದು ವಿಶ್ವಮಾನ್ಯವಾಗಿದೆ. ಪ್ರಸ್ತುತವಾಗಿದೆ.

ಶರಣ ಸಾಹಿತ್ಯವೆಂದರೆ ಕೇವಲ ವಚನ ಸಾಹಿತ್ಯವೆಂದು ಅರ್ಥವಲ್ಲ; ಶರಣರು ೧೨ನೆಯ ಶತಮಾನಕ್ಕೆ ಸೀಮಿತ ರಾದವರಲ್ಲ. ಬಸವಯುಗ, ಬಸವಪೂರ್ವಯುಗ ಮತ್ತು ಬಸವೋತ್ತರ ಯುಗದ (ನೂರೊಂದು ವಿರಕ್ತರ, ಏಳು ನೂರೊಂದು ವಿರಕ್ತೋತ್ತರಯುಗ) ಶರಣರ ಶರಣ ಸಾಹಿತ್ಯದ ತಲಸ್ಪರ್ಶಿಯಾದ ಅಧ್ಯಯನವೂ ಆಗಿರುವುದಿಲ್ಲ. ಇದೇ ಯುಗದ ಇತರ ಶರಣರ, ಶರಣ ಸಾಹಿತ್ಯದ ಅಧ್ಯಯನ ಅಷ್ಟಾಗಿ ನಡೆದಿರುವುದಿಲ್ಲ.

ಇನ್ನು ಬಸವೋತ್ತರ ಯುಗದ ಶರಣರ ಅಪ್ರಕಟಿತ ಶರಣರ ಸಾಹಿತ್ಯ ವೈವಿಧ್ಯಪೂರ್ಣವೂ ಅಪಾರವೂ ಆಗಿದ್ದು, ಇದರ ಪ್ರಕಟಣೆಯ ಕಾರ್ಯ ತೀವ್ರ ಗತಿಯಿಂದ ಆಗಬೇಕಾಗಿದೆ. ಈ ಯುಗದ ಅನುಪಲಬ್ಧ ಸಾಹಿತ್ಯದ ಪರಿವೀಕ್ಷಣೆ, ಸಂಗ್ರಹ ಹಾಗೂ ಪರಿಷ್ಕರಣ ಕಾರ್ಯಗಳು ಇನ್ನು ನಡೆಯಬೇಕಾಗಿದೆ.

ಸ್ವರವಚನ ಸಾಹಿತ್ಯ, ಶರಣ ಸಾಹಿತ್ಯದ ಇನ್ನೊಂದು ಸಾಹಿತ್ಯ ಪ್ರಕಾರ. ಬಸವೋತ್ತರ ಯುಗದ ಈ ಸ್ವರ ವಚನ ಸಾಹಿತ್ಯ ಸಾಗರ ಸದೃಶವಾಗಿದೆ. ಇಲ್ಲಿಯವರೆಗೆ ಪ್ರಕಟವಾದ ಈ ಸಾಹಿತ್ಯ ಅತ್ಯಂತ ಕಡಿಮೆಯಾಗಿದೆ. ಅಪ್ರಕಟಿತವಾದ ಅನುಪಲಬ್ಧವಾದ ಈ ಶರಣ ಸಾಹಿತ್ಯ ಇನ್ನೂ ವಿಪುಲ ಪ್ರಮಾಣದಲ್ಲಿದೆ. ಇದನ್ನು ಪ್ರಕಟಿಸುವ ಕಾರ್ಯ ಜರೂರಾಗಿ ನಡೆಯಬೇಕಾಗಿದೆ.

ಶರಣರು ಅನುಭವವನ್ನು ಕಲಾತ್ಮಕಗೊಳಿಸದೆ ಜನರ ಬದುಕು ಕಲಾತ್ಮಕವಾಗಿರಬೇಕೆಂದು ಬಯಸಿದರು. ಹೀಗಾಗಿ ಅವರು ತಾವು ಒಲಿದಂತೆ ಹಾಡಿದರು, ಬರೆದರು, ಬದುಕಿದರು. ಶರಣ ಸಾಹಿತ್ಯಕ್ಕೆ ಜಾತಿ, ವರ್ಗ, ಲಿಂಗ, ಸೂತಕಗಳು ಇರುವುದಿಲ್ಲ. ಶರಣ ಸಾಹಿತ್ಯವನ್ನು ಜಾತೀಯ ಚೌಕಟ್ಟಿನಲ್ಲಿ ಪ್ರಾದೇಶಿಕ ಪರಿಮಿತಿಯಲ್ಲಿ ನೋಡಬಾರದು. ಇದು ಲಿಂಗಾಯತ ಅಥವಾ ವೀರಶೈವ ಅಥವಾ ಕರ್ನಾಟಕಕ್ಕೆ ಸೀಮಿತವಲ್ಲ. ಇದು ಸಮಸ್ತ ಮಾನವ ಕುಲಕ್ಕೆ ಸಂಬಂಧಿಸಿದ ಸಾಹಿತ್ಯ. ಮಾನವೀಯ ಮೌಲ್ಯದ ಪ್ರತಿಪಾದನೆಯೇ ಈ ಸಾಹಿತ್ಯದ ವಿಶೇಷ ಗುರಿ. ಆದುದರಿಂದ ವಿಶ್ವದ ಬೇರೆ ಬೇರೆ ಪ್ರದೇಶದ ಜನರು ಶರಣ ಸಾಹಿತ್ಯವನ್ನು ಅಭ್ಯಸಿಸುವ ಅನುಕರಿಸುವ ಅಲ್ಲಿಯ ವಿಶ್ವಮಾನ್ಯ ವಿಚಾರ ಗಳನ್ನು ಮಾನವೀಯತೆಗೆ ಸಂಬಂಧಿಸಿದ ಅಂಶಗಳನ್ನು ಅಳವಡಿಸಿಕೊಳ್ಳುವ ಅವಶ್ಯಕತೆಯಿದೆ. ವ್ಯಾಪಕ (ವಿಶಾಲ) ದೃಷ್ಟಿಯಿಂದ ನೋಡಿದಾಗ ಬಸವಣ್ಣನವರು ಲಿಂಗಾಯತರ ಅಥವಾ ವೀರಶೈವರ ಸೊತ್ತಲ್ಲ(ಆಸ್ತಿಯಲ್ಲ) ಡಾ॥ ಅಂಬೇಡ್ಕರ್ ದಲಿತರ ಸೊತ್ತಲ್ಲ. ಅವರು (ಬಸವಣ್ಣ–ಅಂಬೇಡ್ಕರ್) ಇಡೀ ಮನುಕುಲದ ಸೊತ್ತು. ಅವರ ತತ್ವ ಸಿದ್ಧಾಂತಗಳಲ್ಲಿ ಇಡೀ ವಿಶ್ವಕ್ಕೆ ಮಾನ್ಯ ಬಸವಣ್ಣ. ವಿಶ್ವಕ್ಕೆ ಗುರು. ಆತನ ಈ ಕೆಳಗಿನ ವಚನವೇ ಈ ಮಾತಿಗೆ ಸಾಕ್ಷಿ.

*ಹುಸಿಯ ನುಡಿಯಲುಬೇಡ*
*ಅನ್ಯರಿಗೆ ಅಸಹ್ಯ ಪಡಬೇಡ*
*ತನ್ನ ಬಣ್ಣಿಸಲುಬೇಡ*
*ಇದೇ ಅಂತರಂಗಶುದ್ಧಿ*
*ಇದೇ ಬಹಿರಂಗಶುದ್ಧಿ*
*ಇದೇ ಕೂಡಲಸಂಗಮದೇವನೊಲಿಸುವ ಪರಿ.*

ಶರಣ ಸಾಹಿತ್ಯ ವೇದಿಕೆಯ ಸಾಹಿತ್ಯ ಆಗಬಾರದು. ಅದು ಅನುಷ್ಠಾನ ಸಾಹಿತ್ಯ, ಅನುಸಂಧಾನ ಸಾಹಿತ್ಯ ಆಗಬೇಕು. ಅಂದಾಗಲೇ ಲೋಕ ಕಲ್ಯಾಣ, ಗ್ರಾಮರಾಜ್ಯ ಸಾಧ್ಯ.

ಕರ್ನಾಟಕದ ಆ ಹನ್ನೆರಡನೆಯ ಶತಮಾನದ ಸಮಾಜೋಧಾರ್ಮಿಕ ಚಳುವಳಿಯನ್ನು 'ವಚನ ಚಳುವಳಿ' ಎನ್ನುವುದಕ್ಕಿಂತ 'ಶರಣ ಚಳುವಳಿ' ಎಂದು ಕರೆಯುವುದು ಸೂಕ್ತವೆಂದು ಡಾ॥ ಎಂ. ಚಿದಾನಂದಮೂರ್ತಿ ಅಭಿಪ್ರಾಯ ಪಡುತ್ತಾರೆ. 'ಶರಣ' ಮಾತು ಆ ಸಮಾಜದ ಮಾದಾರ

ಚೆನ್ನಯ್ಯ ಡೋಹರ ಕಕ್ಕಯ್ಯ, ಹೆಂಡದ ಮಾರಯ್ಯರಿಂದ ಬಸವ, ಚೆನ್ನಬಸವ, ಅಲ್ಲಮ, ಸಿದ್ಧರಾಮ, ಅಕ್ಕಮಹಾದೇವಿ ಲಕ್ಕಮ್ಮ ಎಲ್ಲರನ್ನು ಒಳಗೊಳ್ಳುತ್ತದೆ. ಅವರು ಹುಟ್ಟಿದ ಬೇರೆ ಬೇರೆ ಜಾತಿಗಳು ಬೇರೆ ಬೇರೆ ಅಂತಸ್ತನ್ನು ಅಂದಿನ ಪರಿಸರದಲ್ಲಿ ಹೊಂದಿರುವುದಾಗಿದ್ದರೂ ಅವರೆಲ್ಲರೂ ಶರಣರಾಗಿ, ಸಾಮಾಜಿಕವಾಗಿ ಸಂಪೂರ್ಣಸಮಾನರಾಗಿದ್ದರು.

ಶರಣ ಸಾಹಿತ್ಯ ಅಧ್ಯಯನದಿಂದ ವ್ಯಕ್ತಿ ಸಂಸ್ಕಾರಗೊಳ್ಳುತ್ತಾನೆ. ವ್ಯಕ್ತಿಯನ್ನು ಪರಿಷ್ಕರಿಸುವ, ಸಂಸ್ಕಾರಗೊಳಿಸುವ ಮಹಾಶಕ್ತಿ ಶರಣ ಸಾಹಿತ್ಯಕ್ಕಿದೆ. ಶರಣರ ವಿಚಾರ ಧಾರೆಗಳ ಪರಿಚಯ ದೇಶಕ್ಕೆ ಪ್ರಪಂಚಕ್ಕೆ ಆಗುವುದು ಹೆಚ್ಚು ಅಗತ್ಯವಿದೆ. ಈ ಹಿನ್ನಲೆಯಲ್ಲಿ ಶರಣ ಸಾಹಿತ್ಯವನ್ನು ಅವರ ವಿಚಾರ ಧಾರೆಗಳನ್ನು ದೇಶದ, ಪ್ರಪಂಚದ ವಿವಿಧ ಭಾಷೆಗಳಿಗೆ ಅನುವಾದಿಸುವ, ಪರಿಚಯಿಸುವ ಕಾರ್ಯ ತೀವ್ರವಾಗಿ ನಡೆಯಬೇಕಾಗಿದೆ.

ಇಂದಿನ ಯುವ ಜನಾಂಗದಲ್ಲಿ ಸೇವಾ ಮನೋಭಾವ ಪ್ರಾಮಾಣಿಕತೆ, ಪರಿಶ್ರಮ, ಪ್ರಯತ್ನ, ಸಜ್ಜನಿಕೆ, ಸದುವಿನಯ, ಸಮಯಪಾಲನೆ, ಸಮರ್ಪಣ ಭಾವಗಳು ಕಡಿಮೆಯಾಗುತ್ತ ನಡೆದಿವೆ. ಜೀವನನಿಷ್ಠೆ, ಕಾರ್ಯನಿಷ್ಠೆಗಳು ಸುಟ್ಟುಕರಕಲಾಗಿ ಹೋಗಿವೆ. ಯುವಕರಲ್ಲಿ ಹತಾಶೆ, ನಿರಾಶೆ, ಸೋಮಾರಿತನ, ಅನಾದರ, ಉಪೇಕ್ಷ ಭಾವಗಳು ಮನೆ ಮಾಡಿಕೊಂಡಿವೆ. ಯುವಕರು ಗುಟ್ಕಾ ಸಂಸ್ಕೃತಿ ಮಾಫಿಯಾ ಸಂಸ್ಕೃತಿ, ಗಾಂಜಾ ಅಫೀಮು ಚರಸ್, ಮದ್ಯಪಾನ ಸಂಸ್ಕೃತಿಗಳ ಗುಲಾಮರಾಗಿದ್ದಾರೆ. ಇವುಗಳಿಂದ ಹೊರಬಂದು ಶರಣ ಸಂಸ್ಕೃತಿ, ಶ್ರಮ ಸಂಸ್ಕೃತಿಗಳ ಆರಾಧಕರಾಗಿ, ಅನುಷ್ಠಾನವುಳ್ಳವರಾಗಿ ಮುನ್ನಡೆಯುವಂತಾಗಲಿ ಶರಣ ಚಾರಿತ್ರ್ಯವನ್ನು ಶರಣರಂತಹ ಉದಾತ್ತ ಬದುಕನ್ನು ಅವರು ಪ್ರತಿಪಾದಿಸಿದ ಮಾನವೀಯ ಮೌಲ್ಯಗಳನ್ನು ನಮ್ಮ ಬದುಕಿನಲ್ಲಿ ರೂಢಿಸಿಕೊಳ್ಳುವುದು ಇಂದು ತೀರಾ ಅವಶ್ಯವಿದೆ.

ನಮ್ಮ ಪ್ರಜಾಪ್ರಭುತ್ವರಾಷ್ಟ್ರವಾದ ಸಂವಿಧಾನದಲ್ಲಿ ಸ್ವಾತಂತ್ರ್ಯ ಸಮಾನತೆ, ಸಹೋದರತ್ವ ಸಾಮಾಜಿಕ ನ್ಯಾಯ, ಜಾತ್ಯಾತೀತತೆ ಮುಂತಾದ ಬದುಕಿನ ಮೌಲ್ಯಗಳನ್ನು ಉಲ್ಲೇಖಿಸಲಾಗಿದೆ. ಆದರೆ ಸಮಕಾಲೀನ ರಾಜಕಾರಣ ಇವುಗಳನ್ನು ಅಪಮೌಲ್ಯೀಕರಣಗೊಳಿಸಿವೆ. ದೇಶದ ಅಭಿವೃದ್ಧಿ ಹೆಸರಿನಲ್ಲಿ ನಡೆಯುತ್ತಿರುವ ಪರಿಸರನಾಶ, ಕೆಳವರ್ಗದವರ ಮೇಲೆ ಮೇಲ್ವರ್ಗದವರಿಂದ ನಿರಂತರವಾಗಿ ನಡೆಯುತ್ತಿರುವ ಹಲ್ಲೆ ಇತ್ಯಾದಿ ನೋಡಿದರೆ ಸಮಾನತೆ, ಸಹೋದರತ್ವ ಸಾಮಾಜಿಕನ್ಯಾಯ, ಇಂಥ ಮಾತುಗಳಿಗೆ ಅರ್ಥವುಂಟೇ? ಎನಿಸುತ್ತದೆ. ಇಂಥ ಪರಿಸ್ಥಿತಿಯಲ್ಲಿ ೮೦೦ ವರ್ಷಗಳ ಹಿಂದೆ ಬಸವಾದಿ ಶರಣರು ಕಲ್ಯಾಣದಲ್ಲಿ ನಡೆಸಿದ ವೈಚಾರಿಕ ಕ್ರಾಂತಿ ಎಷ್ಟು ಮಹತ್ವದ್ದು ಎಂದು ತಿಳಿದು ಬರುತ್ತದೆ.

ಧರ್ಮದ ಎಲ್ಲ ಲಕ್ಷಣಗಳು ಎಲ್ಲ ಕಾಲಕ್ಕೂ ಪ್ರಸ್ತುತವಾಗುತ್ತವೆ ಎಂದು ಹೇಳಲು ಬರುವುದಿಲ್ಲ. ಸ್ಥಗಿತಗೊಳ್ಳುವುದೇ ಧರ್ಮದ ಲಕ್ಷಣವಾಗಿರುವುದರಿಂದ ಅದನ್ನು ಜಂಗಮಗೊಳಿಸುವ ಅಥವಾ ಚಲನಶೀಲಗೊಳಿಸುವ ಪ್ರಯತ್ನಗಳು ನಡೆಯಬೇಕು. ಶರಣ ಧರ್ಮದ ಎಷ್ಟೋ ಅಂಶಗಳು ಇಂದಿನ ಬದುಕಿಗೆ ಅಪ್ರಸ್ತುತವಾಗಿವೆ. ಆದರೂ ಶರಣ ಧರ್ಮದ ಎಷ್ಟೋ ಮಹತ್ವದ ವಿಚಾರಗಳು ಎಲ್ಲಕಾಲಕ್ಕೂ ಪ್ರಸ್ತುತವಾಗಬಲ್ಲ ಮಹತ್ವವನ್ನು ಪಡೆದುಕೊಂಡಿವೆ. ಅಂಥವುಗಳಲ್ಲಿ ಭಾಷೆ ಒಂದು.

ಭಾಷೆ : *ಕೊಲುವೆನೆಂಬ ಭಾಷೆ ದೇವನದಾದರೆ*
*ಗೆಲುವೆನೆಂಬ ಭಾಷೆ ಸದ್ಭಕ್ತನದು*
*ಸತ್ಯವೆಂಬ ಕೂರಲಗನು ಹಿಡಿದು*
*ಸದ್ಭಕ್ತರು ಗೆದ್ದರೂ ಕಾಣಾಕೂಡಲಸಂಗಮದೇವಾ*

ಎಲ್ಲಾ ಆಧ್ಯಾತ್ಮದ ವಿಚಾರಗಳನ್ನು ಪುರೋಹಿತಶಾಹಿಗಳ (ವೈದಿಕರು) ಮಾರ್ಗಶೈಲಿಯಲ್ಲಿ (ಸಂಸ್ಕೃತ ಮಿಶ್ರಿತ ಚಂಪೂ) ಹೇಳಿದ್ದರಿಂದ ಮತ್ತು ಆ ಭಾಷೆಯನ್ನು ಶೂದ್ರರು ಬಳಸದಂತೆ ವೈದಿಕರು ತಡೆಗಟ್ಟಿದ್ದರಿಂದ ಅಲ್ಲಿಯ ಅನೇಕ ವಿಷಯಗಳು ಜನಸಾಮಾನ್ಯರಿಗೆ ತಲುಪಲಿಲ್ಲ ಇದನ್ನು ಪ್ರತಿಭಟಿಸಲೆಂಬಂತೆ ಶಿವಶರಣರು ಮಾರ್ಗಸಂಪ್ರದಾಯವನ್ನು (ಚಂಪೂ) ಬದಿಗೊತ್ತಿ ಜಾನಪದ ಭಾಷೆಯನ್ನು (ಆಡುನುಡಿ) ತಮ್ಮ ವಿಚಾರಧಾರೆಗೆ ವಾಹಕವಾಗಿ ಬಳಸಿಕೊಂಡರು. ಇದರಿಂದಾಗಿ ಕೆಳ ಮತ್ತು ಮಧ್ಯಮ ವರ್ಗದಿಂದ ಬಂದ ಕಕ್ಕಯ್ಯ, ಹರಳಯ್ಯ, ಮಾರಯ್ಯ, ಚೌಡಯ್ಯ ಇವರಿಗೆ ಜೊತೆಯಾಗಿ ದುಡಿದ ಕಾಳವ್ವೆ, ಸಂಕವ್ವೆ, ಗೊಗ್ಗವ್ವ ಮುಂತಾದ ನೂರಾರು ಶರಣರು ಮೊದಲ ಬಾರಿಗೆ ತಮ್ಮ ಜೀವನಾನುಭವವನ್ನು ತಮ್ಮ ವಚನಗಳಲ್ಲಿ ದಾಖಲಿಸಲು ಸಾಧ್ಯವಾಯಿತು. ಜನವಾಣಿಯನ್ನೇ ದೇವವಾಣಿಯ ಎತ್ತರಕ್ಕೇರಿಸಿದ ಪವಾಡ ಶರಣರದು.

**ಕಾಯಕ :** ಕಾಯಕ, ದಾಸೋಹ ಹಾಗೂ ಪ್ರಸಾದ ಸಿದ್ಧಾಂತಗಳು ಶರಣರು ಜಗತ್ತಿಗೆ ನೀಡಿದ ಬಹು ದೊಡ್ಡ ಕೊಡುಗೆಗಳು. ಇದು ಆರ್ಥಿಕ ಸಿದ್ಧಾಂತದ ಬೆನ್ನೆಲುಬು. ಮಾರ್ಕ್ಸ್, ಲೆನಿನ್, ಗಾಂಧೀಜಿ ಸಿದ್ಧಾಂತ ಮೀರಿದ ದೈವೀಶಕ್ತಿಯ ಪರಿಶುದ್ಧ ಸ್ಪರ್ಶ ಇಲ್ಲಿದೆ. ಪ್ರತಿಯೊಬ್ಬನಲಿ ಕಾಯಕ ಮಾಡಿ





ದ್ರವ್ಯ ಸಂಪಾದಿಸಬೇಕು. ದುಡಿಯದೆ ಉಣ್ಣುವ ಹಕ್ಕು ಯಾರಿಗೂ ಇಲ್ಲ ಎನ್ನುವ ಮಾತು ಪ್ರಚಲಿತ ಆಧುನಿಕ ಬದುಕುಗೆ ಮಾರ್ಗದರ್ಶಿಯಾಗಿದೆ. ತಾನು ಅನುಸರಿಸುವ ವೃತ್ತಿಯನ್ನು ಪ್ರತಿ ವ್ಯಕ್ತಿಯೂ ನಿಷ್ಠೆ, ಪ್ರಮಾಣಿಕತೆ ಪೂಜ್ಯಭಾವದಿಂದಲೂ ಕಾಣಬೇಕು, ಅದೇ ದೇವರ ಪೂಜೆ. ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಪಡೆಯಬೇಕು ಹೆಚ್ಚಿನದನ್ನು ಸ್ವೀಕರಿಸಬಾರದು. ಸತ್ಕಾರ್ಯದಲ್ಲಿ ಸಂಪಾದನೆಯಾದುದನ್ನು ಸತ್ಕಾರ್ಯಕ್ಕಾಗಿ ಮಾತ್ರ ಬಳಸಬೇಕು. ಹಣವನ್ನು ಕೂಡಿಡಬಾರದು. ಎಲ್ಲ ವೃತ್ತಿಗಳು ಸಮಾನವಾದವು. ಅವುಗಳಲ್ಲಿ ಮೇಲು ಕೀಳಿಲ್ಲ.

ಈ ತತ್ವವು ಅನುಷ್ಠಾನಕ್ಕೆ ಬಂದರೆ ಒಬ್ಬರು ಇನ್ನೊಬ್ಬರನ್ನು ಶೋಷಣೆ ಮಾಡುವುದು ತಪ್ಪುತ್ತದೆ. ಆಧುನಿಕ ಯುಗದಲ್ಲಿ ಪೌರ್ವಾತ್ಯ-ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಶ್ರಮಿಕ ವರ್ಗ ಹಾಗೂ ಶ್ರೀಮಂತ ವರ್ಗವನ್ನು ಕಾಣುತ್ತೇವೆ. ಈ ಭಿನ್ನತೆ ಹೋಗಲು ಪ್ರತಿಯೊಬ್ಬನು ಕಡ್ಡಾಯವಾಗಿ ಕಾಯಕ ಮಾಡಲೇಬೇಕು.

ದಾಸೋಹ : ಕಾಯಕ ಮತ್ತು ದಾಸೋಹ ತತ್ವಗಳಲ್ಲಿ ಒಂದು ದುಡಿಮೆಯನ್ನು ಇನ್ನೊಂದು ಅದರ ವಿನಿಯೋಗವನ್ನು ಸೂಚಿಸುತ್ತದೆ. ತನ್ನ ದುಡಿಮೆಯ ಹೆಚ್ಚಿನ ಹಣವನ್ನು ವಿನಮ್ರ ಭಾವದಿಂದ ಸಮಾಜಕ್ಕೆ ಸಮರ್ಪಿಸುವುದು ದಾಸೋಹ. ಇದರಲ್ಲಿ ಸೋಹ ಇರಬಾರದು. ಅಂದಿನ ಕಾಯಕ ಅಂದಂದಿಗೆ ಸಲ್ಲಬೇಕು. ನಾಳಿಗೆ ಬೇಕೆಂದು ಕೂಡಿಟ್ಟು ಮಾಡುವುದು ದಾಸೋಹವಾಗುವುದಿಲ್ಲ.

*'ಅನ್ನದೊಳಗೊಂದಗುಳ*
*ಹೊನ್ನಿನೊಳಗೊಂದೊರೆಯ*
*ಸೀರೆಯೊಳಗೊಂದೆಳೆಯ*
*ಇಂದಿಂಗೆ ನಾಳಿಂಗೆ ಬೇಕೆಂದೆನಾದೊಡೆ*
*ನಿಮ್ಮಾಣೆ ನಿಮ್ಮ ಪುರಾತನರಾಣೆ*
*ನಿಮ್ಮ ಶರಣರಿಗಲ್ಲದೆ ಮತ್ತೊಂದಕ್ಕೀಯೆನು*
*ಕೂಡಲಸಂಗಮದೇವ. - ಬಸವಣ್ಣ*

*ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವನು*
*ಕೋಳಿಯೊಂದು ಗುಟುಕು ಕಂಡರೆ ಕೂಗಿ ಕರೆಯದೆ*
*ತನ್ನ ಕುಲವೆಲ್ಲವನು.*
*ಶಿವಭಕ್ತನಾಗಿ ಭಕ್ತಿ, ಪಕ್ಷವಿಲ್ಲದಿದ್ದರೆ ಕಾಗೆ ಕೋಳಿ*
*ಯಿಂದ ಕರಕಷ್ಟ ಕೂಡಲಸಂಗಮದೇವ.*

ಸ್ವಾತಂತ್ರ್ಯ, ಸಮಾನತೆ, ಬಂಧುತ್ವ, ಜಾತ್ಯತೀತತೆ ಮನೋಭಾವಗಳ ಸಂವಿಧಾನ ಸೂತ್ರಗಳ ಶಕ್ತಿ ಇಲ್ಲಿ ಅಡಕವಾಗಿದೆ.

ಅಸ್ಪೃಶ್ಯತೆ ನಿವಾರಣೆ : ಈ ದಿನದ ಅನೇಕ ಮಹತ್ವದ ಚಳುವಳಿಗಳಲ್ಲಿ ಜಾತಿ ನಿರ್ಮೂಲನೆ ಚಳುವಳಿ ಒಂದು ಉದಾ. ಗಾಂಧಿ, ಅಂಬೇಡ್ಕರ್, ಲೋಹಿಯಾ, ಮುಂತಾದ ಮಹಾನ್ ವ್ಯಕ್ತಿಗಳ ವಿಚಾರಧಾರೆಯಿಂದ ಸ್ಫೂರ್ತಿಗೊಂಡು ಅನೇಕ ಸಂಘ ಸಂಸ್ಥೆಗಳು ಅಂತರ ಜಾತೀಯ ವಿವಾಹ ಪ್ರೋತ್ಸಾಹಿಸಿವೆ. ಆದರೆ ಬಸವಾದಿ ಶಿವಶರಣರು 12ನೇ ಶತಮಾನದಲ್ಲಿಯೇ ಅಂತರ ಜಾತೀಯ ವಿವಾಹ ಏರ್ಪಡಿಸಿ ಜಾತಿ ನಿರ್ಮೂಲನೆಗೆ ಕಾರಣರಾದರು.

ಸಾಮಾಜಿಕ ವ್ಯವಸ್ಥೆ ವಿಡಂಬಿಸಿದ್ದು ಹಿಂದೂ ಸಮಾಜದ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯನ್ನು ವಚನಕಾರರು ತೀವ್ರವಾಗಿ ಟೀಕಿಸಿದರು.

*ಸೆಟ್ಟಿಯೆಂಬೆನೆ ಸಿರಿಯಾಳನ*
*ಮಡಿವಾಳನೆಂಬೆನೆ ಮಾಚಯ್ಯನ*
*ಡೋಹರನೆಂಬೆನೆ ಕಕ್ಕಯ್ಯನ*
ಆನು ಹಾರುವನೆಂದೆಡೆ ಕೂಡಲಸಂಗಯ್ಯ ನಗುವನಯ್ಯ
ಎಂದಿದ್ದಾರೆ.

ಲಿಂಗದೀಕ್ಷೆಯ ನಂತರ ಎಲ್ಲರೂ ಸಮಾನರು.
ಕುಲವನೋಳ್ಪಡೆ ಹುರುಳಿಲ್ಲ
ಅವರ ನಡೆನೋಳ್ಪಡೆ ನಡೆಯುವರು
ತ್ರಿಲೋಕದಲ್ಲಿಲ್ಲ.

ನಡೆ-ನುಡಿ ನೋಡಿ ವ್ಯಕ್ತಿಯನ್ನು ಗುರುತಿಸಬೇಕು ಕುಲವನ್ನಲ್ಲ ಎಂದಿದ್ದಾರೆ.

ಸ್ತ್ರೀ-ಪುರುಷರ ವಿಂಗಡಣೆ : ಶಿವಶರಣರು ಇಡೀ ಮಾನವ ಜನಾಂಗವನ್ನು ಸ್ತ್ರೀ ಪುರುಷರೆಂದುದು ಸೂಕ್ತವಾಗಿದೆ.

ಉದಾ: ಮೊಲೆ ಮೂಡಿಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮನು
ಗಂಡೂ ಅಲ್ಲ, ಹೆಣ್ಣೂ ಅಲ್ಲ ಕಾಣಾ ರಾಮನಾಥ.

-ಹೀಗೆ ಬಾಹ್ಯರೂಪ ಆದರಿಸಿ ಗಂಡು-ಹೆಣ್ಣು ಗುರುತಿಸುತ್ತೇವೆ. ಆದರೆ ಮಡದಿಯ ಪ್ರಾಣಕ್ಕೆ, ಮೊಲೆ ಮುಡಿ ಇದ್ದಿತ್ತೇ ಎಂದು ಪ್ರಶ್ನಿಸುತ್ತಾರೆ. ಇಂದಿನ ಸ್ತ್ರೀ ಸ್ವಾತಂತ್ರ್ಯದ ಪರಿಕಲ್ಪನೆಯಲ್ಲಿ ಪುರುಷ ದ್ವೇಷವಿದೆ. ಶರಣರಲ್ಲಿ ಅದಿಲ್ಲ. ಈ ವಿಶಾಲ ಮನೋಭಾವನೆ ಆಧುನಿಕ ಜಗತ್ತಿಗೆ ಬೇಕಾಗಿದೆ.

ಸಾಮಾಜಿಕ ಸಮಾನತೆ :

ಅಪ್ಪನು ನಮ್ಮ ಡೋಹರ ಕಕ್ಕಯ್ಯ
ಬೊಪ್ಪನು ನಮ್ಮ ಮಾದಾರ ಚೆನ್ನಯ್ಯ
–ಎಂದು ಹೇಳುತ್ತ ಕೀಳುಕುಲದ ಶರಣರ ಜೊತೆಗೆ ನಮ್ಮ ಬಾಂಧವ್ಯ ಬೆಳೆಸಿಕೊಂಡ ಬಸವಣ್ಣನವರು ೧೨ನೇ ಶತಮಾನದ ನಮಗೆ ಮಾದರಿ ವ್ಯಕ್ತಿ ಆಗಿದ್ದಾರೆ.

ಸಮಾಜವಾದಿ ಲೋಹಿಯಾ ಸಪ್ತ ಸಮಾನತೆಗೆ ಹರಿಕಾರ ರಾದಂತೆ ಬಸವಣ್ಣನವರು ಸಾಮಾಜಿಕ ಅಸಮಾನತೆ ಹೊಡೆದೋಡಿಸುವ ಮೂಲಕ ಹರಿಕಾರರಾಗಿದ್ದಾರೆ.

ಅನುಭಾವ ಮಂಟಪ : ಇದು ವಿಶ್ವದ ಪ್ರಥಮ ಪಾರ್ಲಿಮೆಂಟ್ ಆಗಿತ್ತು. ಅಂದೇ ಪ್ರಜಾರಾಜ್ಯ ಸ್ಥಾಪನೆಯಾಯಿತು. ಈಗಿನ ದೆಹಲಿ ಪಾರ್ಲಿಮೆಂಟಿಗಿಂತಲೂ ಆಗಿನ ಅನುಭವಮಂಟಪ ದಲ್ಲಿ ದಲಿತರು ಹೆಚ್ಚಿನ ಸಂಖ್ಯೆಯಲ್ಲಿದ್ದರು. ಬಹುಶಃ ಹೆಣ್ಣು ಮಕ್ಕಳಿಗೆ ಸೀಟು ಕಾಯ್ದಿರಿಸುವ ಚರ್ಚೆ ಈಗ ನಡೆದಿದೆ. ಆದರೆ ಬಸವ ಗುರುವಿನ ಪಾರ್ಲಿಮೆಂಟಿನಲ್ಲಿ 33 ಜನ ವಚನಕಾರ್ತಿಯರು ಇದ್ದರು.

ಇಂದು ಮಠಾಧೀಶರಾದ ನಾವು (ಭಾಲ್ಕಿ ಶ್ರೀ ಹೇಳಿಕೆ) ಬಸವಣ್ಣನವರ ತತ್ವಪೂರ್ತಿಯಾಗಿ ಬೆಳಕಿಗೆ ಬಂದರೆ ಎಲ್ಲಿ ನಮ್ಮ ಪ್ರಾಮುಖ್ಯತೆ ಹೋಗುತ್ತದೆಯೋ ಎಂಬ ಗಾಬರಿ ಯಾಗಿದ್ದೇವೆ. ಇಂದು ನಾವು ನಮ್ಮ ಮಠದ ಪೂರ್ವ ಗುರುಗಳನ್ನು ಹೆಚ್ಚು ಪ್ರಚಾರ ಮಾಡಿ ಅವರದೇ ಜಾತ್ರೆ ಉತ್ಸವಗಳಲ್ಲಿ ಭಾಗಿಯಾಗಿದ್ದೇವೆ. ಆ ಭರಾಟೆಯಲ್ಲಿ ಬಸವಣ್ಣ ನಮಗೆ ಮರತೇ ಹೋಗಿದ್ದಾರೆ.

ಕ್ರೈಸ್ತರಲ್ಲಿ ಎರಡು ಗುಂಪುಗಳಿವೆ. ಒಂದು ಕೆಥೊಲಿಕ್ ಎರಡು ಪ್ರೊಟೆಸ್ಟೆಂಟ್. ಇಬ್ಬರಿಗೂ ಯೇಸು ಕ್ರಿಸ್ತನೇ ಪೂಜ್ಯರಾಗಿ ಯೇಸುವನ್ನೇ ಗುರುವೆಂದು ತಿಳಿಯುತ್ತಾರೆ. ಅದೇ ರೀತಿ ಇಸ್ಲಾಂ ಅನುಯಾಯಿ ಕೇಳಿದಾಗ ಪೈಗಂಬರ ನಮ್ಮ ಗುರು–ಖುರಾನ್ ನಮ್ಮ ಧರ್ಮಗ್ರಂಥವೆಂದು ಹೇಳುತ್ತಾರೆ. ಅದೇ ಒಬ್ಬ ಸುಶಿಕ್ಷಿತ ಲಿಂಗಾಯತ ಅನುಯಾಯಿಗೆ ನಿಮ್ಮ ಧರ್ಮ ಗುರು ಯಾರು? ಎಂದು ಕೇಳಿದರೆ ಅವನು ನಮಗೆ ಗೊತ್ತಿಲ್ಲ ಎನ್ನುತ್ತಾರೆ. ಧಾರ್ಮಿಕ ಭಾವನೆ ಇದ್ದರೆ ಭಾಲ್ಕಿ ಶ್ರೀ ನಾಗನೂರು ಶ್ರೀ ಎಂದು ಹೆಸರಿಸಬಹುದು.

ಅಥಣಿ ಶಿವಯೋಗಿಗಳು ಅಪ್ಪನವರ ವಚನಗಳು ಎಂದು ಬಸವಣ್ಣನವರ ವಚನಗಳಿಗೆ ಕರೆಯುತ್ತಿದ್ದರು. ಅವುಗಳನ್ನು ನೆಲದ ಮೇಲೆ ಇಡುತ್ತಿರಲಿಲ್ಲ. ಈ ಆದರ್ಶ ನಮಗೆ ಬೇಕು. 'ಮೇಟಿ ಗೂಟ ಗಟ್ಟಿ ಇದ್ದಾಗಲೇ ರಾಶಿ ಚೆನ್ನಾಗಿ ನಡೆಯುತ್ತದೆ. ಲಿಂಗಾಯತದ ಧರ್ಮಕ್ಕೆ ಅಪ್ಪ ಬಸವಣ್ಣ ನವರು ಮೇಟಿ ಇದ್ದ ಹಾಗೆ. ಆದರೆ ನಾವು ಈ ಮೇಟಿ ಇಡಲಾರದೆ ರಾಶಿ ಮಾಡುತ್ತೇವೆಂದು ಹೇಳುವುದು ಹುಚ್ಚು ಸಾಹಸ.

ಹೀಗೆ ಶರಣ ಸಾಹಿತ್ಯ ಮತ್ತು ಸಂಸ್ಕೃತಿಯಲ್ಲಿ ಜೀವನ ಮೌಲ್ಯಗಳಿಗೆ ಕೊರತೆಯಿಲ್ಲ. ಅವುಗಳನ್ನು ಕೇವಲ ಪ್ರವಚನ ಗಳಿಗೆ ಮಾತ್ರ ಬಳಸದೆ ನಮ್ಮ ಜೀವನದಲ್ಲಿ ಅಳವಡಿಸಿಕೊಂಡು ನಡೆದಿದ್ದಾರೆ. ನಮ್ಮ ಆಧುನಿಕರ ಬದುಕು ಭವ್ಯವಾಗು ವುದರಲ್ಲಿ ಸಂದೇಹವಿಲ್ಲ.

*

## ಹಾರೈಕೆ



ತುಮಕೂರಿನ ಶ್ರೀ ಎನ್.ಸಿ. ನಾಗಾನಂದಸ್ವಾಮಿ ಜಲಸ್ಥಂಭ ವಿದ್ಯೆಯಲ್ಲಿ ಅಪ್ರತಿಮ ಸಿದ್ಧಿ ಪಡೆದಿರುತ್ತಾರೆ. ಶ್ರೀಯುತರು ಭಾರತ ದೇಶದ ಉದ್ದಗಲಕ್ಕೂ ಹಲವು ಪ್ರದರ್ಶನಗಳನ್ನು ನೀಡಿ ಪ್ರಸಿದ್ಧಿ ಪಡೆದಿರುತ್ತಾರೆ ಅಲ್ಲದೆ ಕಳೆದ ಸೆಪ್ಟೆಂಬರ್ 2000ನೇ ಇಸವಿಯಲ್ಲಿ ದೆಹಲಿಯ ತಾಲ್ಕಟೋರ ಈಜು ಕೊಳದಲ್ಲಿ 22 ಗಂಟೆಗಳ ಕಾಲ ಸತತವಾಗಿ ದೇಹದ ಯಾವುದೇ ಅಂಗಾಂಗಗಳನ್ನು ಚಲಿಸದೆ ಲಂಬಾಕಾರವಾಗಿ ನಿಂತು ಅಮೋಘ ಸಾಧನೆ ಮಾಡಿದ್ದಾರೆ.

ಶ್ರೀ ಎಸ್.ಸಿ. ನಾಗಾನಂದಸ್ವಾಮಿಯವರ ಈ ಸಾಧನೆಯು ಸಮಾಜದ ಯುವ ಪೀಳಿಗೆಯ ಇತರರಿಗೂ ಸ್ಫೂರ್ತಿದಾಯಕವಾಗಲೆಂದು 'ಸಿದ್ಧಗಂಗಾ' ಹಾರೈಸುತ್ತದೆ.





# ಮಹದೇಶ್ವರ–ಉದ್ದಾನೇಶ್ವರರ ಅನಾದಿ ಪ್ರಸಾದಲೀಲಾಪ್ರಸಂಗ

–ಡಿ.ಬಿ. ಮೃತ್ಯುಂಜಯಪ್ಪ,
'ಬಸವಕುಟೀರ' ದೊಡ್ಡಸಾರಂಗಿ, ತುಮಕೂರು ತಾ॥

ಆದಿಪ್ರಸಾದ ಅನಾದಿಪ್ರಸಾದ
ವೇದಕ್ಕೆ ನಿಲುಕದ ಅಭೇದಪ್ರಸಾದ
ಅಖಂಡೇಶ್ವರನ ಅವಿರಳಪ್ರಸಾದ
ಎನಗೆ ಸಾಧ್ಯವಾಯಿತ್ತು ನೋಡಾ
(ಸಂ.ವ.ಸಂ. ಒಂಬತ್ತು ವ.ಸಂ.416)

ಷಣ್ಮುಖ ಶಿವಯೋಗಿಗಳ ವಚನವನ್ನು ಅನುಭಾವಿಗಳು ಬೇರೆ ಬೇರೆಯಾಗಿ ವಿವರಿಸುವರು. ಅನಾದಿ ಗಣೇಶ್ವರ ಮಹಾ ಮಹಿಮಾನ್ವಿತ ಶ್ರೀ ಮಲೆ ಮಹದೇಶ್ವರರ ಜೀವನದ ಒಂದು ಲೀಲಾಪ್ರಸಂಗದ ಆಧಾರವಿಡಿದು ಈ ವಚನ ವಿಮರ್ಶಿಸಿದರೆ ಚೆನ್ನ. ಆದಿಪ್ರಸಾದವೆಂಬಲ್ಲಿ ಜಗತ್ತಿನ ಎಲ್ಲಾ ಆಗುಬೇಗುಗಳಿಗೆ ಪ್ರಸಾದವೇ ಮೂಲಕಾರಣ. ಪರವಸ್ತುವು ಜೀವಾತ್ಮರಿಗೆ ಅನುಗ್ರಹಿಸಿದ ಮಹಾಪ್ರಸಾದವೇ ಈ ಜಗತ್ತಿನ ಸಕಲ ಜೀವ ರಾಶಿಗಳು ಪಂಚಭೂತಗಳ ಸಾರವನ್ನಾಶ್ರ ಯಿಸಿಯೇ ಬೆಳೆದು ಬಾಳುವುದು. ಪರವಸ್ತುವಿನಿಂದ ಬೇರಾಗಿ ಬಂದ ಜೀವಾತ್ಮರು ಗಳಿಗೆಲ್ಲಾ ಮತ್ತೆ ಪರವಸ್ತುವ ಕೂಡಿ ಸುಖಪಡೆಬೇಕೆಂಬ ಆಸೆ. ಅದಕ್ಕಾಗಿ ಬೇರೆ ಬೇರೆ ಧರ್ಮಗಳ ಹೆಸರಿನಲ್ಲಿ ಬೇರೆ ಬೇರೆ ಸಾಧನ ಮಾರ್ಗವಿಡಿದು ಸಾಗುತ್ತಿಹರು. ಆ ಧರ್ಮ ಸರಿ ಇಲ್ಲ ಇದು ಸರಿ ಎಂದೆಲ್ಲಾ ಹೋರಾಟ ನಡೆಸುತ್ತಿಹರು. ಎಲ್ಲಾ ಧರ್ಮಗಳೂ ಆತ್ಮನು ಬಂದ ಹಾದಿ ಪರವಸ್ತುವ ಕೊಡುವ ಹಾದಿ ಒಂದೇ ಎಂದೂ ಹೇಳುತ್ತದೆ. ಈ ಆತ್ಮನ ಹಾದಿಯಾದ ಆಧ್ಯಾತ್ಮ ದರಿವಿಲ್ಲದೆ ಧರ್ಮದ ಹೆಸರಿನಲ್ಲಿ ಬೇಗುದಿ ಪಡುತ್ತಿದ್ದಾರೆ.

ಭೂಮಿಯ ಆಧಾರವಿಡಿದು ನೀರುಗಾಳಿಯ ಬಲ ದಿಂದ ಬೆಳೆದ ಸಸ್ಯರಾಶಿಗಳು ಭೂಮಿ ನೀರು ಗಾಳಿ ರವಿ ಕಿರಣಗಳ ಮೋಹ ಬಿಟ್ಟಿರಲಾರವು, ಬದುಕಲಾರವು. ಇವು ಗಳಿಂದಾದ ಬೀಜಗಳೂ ಪಂಚಭೂತಗಳ ಮೋಹಪರ ವಶವಾಗಿರುವುದು ಸಹಜ. ಪಂಚಭೂತಾತ್ಮಕ ಮೋಹ ಮಯ ಆಹಾರಧಾನ್ಯಗಳನ್ನುಂಡು ಪ್ರಾಣಿಗಳು ಮಾನವರು ಕೂಡ ಪಂಚಭೂತಗಳ ಮೋಹಿತರಾಗಿ ಬೆಳೆಯುತ್ತಾ ಬಾಳುತ್ತಾ ದೇಹದಲ್ಲಿರುವ ನಾನೆಂಬ ಆತ್ಮನ ಮರೆವೆಗೆ ಒಳಗಾಗುತ್ತಾರೆ. ಈ ಆತ್ಮರು ಬಂದ ದಾರಿಯ ಸೇರಬೇಕಾದ ದಾರಿಯ ಮರೆಯುತ್ತಾರೆ. ಈ ಆದಿ ಪ್ರಸಾದ ಜಗತ್ತಿನ ಪ್ರವೃತ್ತಿ ಮಾರ್ಗಕ್ಕೆ ಆದಿಯಾಗಿದೆ. ಈ ಜೀವಿಗಳು ತಮ್ಮ ತನುತ್ರಯಗಳ ಬೆಳವಣಿಗೆಗೆ ಎಂತಹ ಆಹಾರ ನೀರು ಗಾಳಿ ಬೆಳಕನ್ನು ಪಡೆಯುತ್ತಿವೆ ಎಂಬುದನ್ನು ಅವುಗಳ ವ್ಯವಹಾರದಿಂದ ತಿಳಿಯಬಹುದು. ಸಸ್ಯಗಳನ್ನೇ ತೆಗೆದುಕೊಂಡರೆ ಗೊಬ್ಬರದ ನೆಲದಲ್ಲಿ ನೀರಿನ ಕೊರತೆ ಯಿಲ್ಲದೆ ಬಿಸಿಲಿನಲ್ಲಿ ಬೆಳೆದ ಗಿಡಮರಗಳು ಸೊಂಪಾಗಿ ನಳನಳಿಸುತ್ತವೆ. ಬಂಜರು ಭೂಮಿಯಲ್ಲಿ ನೀರಿನ ಅಭಾವದಲ್ಲಿ ನೆರಳಲ್ಲಿ ಬೆಳೆದ ಗಿಡಗಳು ಕೊರಗುತ್ತವೆ. ಸಾತ್ವಿಕ ಆಹಾರವನ್ನುಂಡು ಶುಚಿಯಾದ ನೀರು ಕುಡಿದು ಉತ್ತಮವಾದ ವಾಯುಸೇವನೆ ಯಿಂದ ಸುಜ್ಞಾನದ ಬೆಳಕಿನಲ್ಲಿ ಕಾರ್ಯಪ್ರವೃತ್ತನಾದ ಮನುಜ ದೇಶಕ್ಕೆ ಆಸ್ತಿಯಾಗುತ್ತಾನೆ. ತಾಮಸ ಆಹಾರವನ್ನುಂಡು ಮದ್ಯಪಾನಮಾಡುತ್ತ ಧೂಮಪಾನಾಸಕ್ತನಾಗಿ ಅಜ್ಞಾನವಶ ನಾಗಿ ವ್ಯವಹರಿಸುತ್ತಾ ರೋಗಿಯಾಗಿ ದೇಶಕ್ಕೆ ಸಮಾಜಕ್ಕೆ ಮಾರಕನಾಗುತ್ತಾನೆ. ಮಾಯಾಂಶಭರಿತ ಆಹಾರ ಪಾನಿಯಾದಿಗಳಿಂದ ಮಾಯಾಪಾಶಬಂಧಿತನಾಗಿ ಪಶು ವೆನಿಸಿಕೊಂಡು ಕಾಲ ಬಡಿಯುತ್ತ ಭವಪಂಕದಲ್ಲಿ ಮುಳುಗುತ್ತಿಹ ಜೀವಾತ್ಮರ ಕಂಡು ಪರಮಾತ್ಮನು ಕಾಲಕಾಲಾದಿ ಅನಾದಿ ಗಣೇಶ್ವರರ ಅಂಶವ ಜಗತ್ತಿಗೆ ಕಳುಹಿಸುತ್ತಿರುವನು ಈ ಅನಾದಿ ಗಣೇಶ್ವರರು ಜೀವಾತ್ಮರ ದಾರಿ ತಪ್ಪಿಸುವ ಮಾಯಾಂಶ ಪೂರಿತ ಆದಿ ಪ್ರಸಾದವ ನೋಡಿ ರೂಪುರುಚಿ ತೃಪ್ತಿಗಳ ಮೂಲಕ ಸ್ಥೂಲಸೂಕ್ಷ್ಮ ಕಾರಣ ಶರೀರಗಳ ಪ್ರವೇಶಿಸುವ ಪದಾರ್ಥಗಳನ್ನು ಶಿವಭಕ್ತಿ ಶಿವಜ್ಞಾನ ಶಿವಕ್ರಿಯೆಗಳ ಬಲದಿಂದ ಮಾಯಾ ವಿರಹಿತವಾಗಿಸಿ ಶುದ್ಧ ಸಿದ್ಧ ಪ್ರಸಿದ್ಧ ವೆಂಬ ಅನಾದಿ ಪ್ರಸಾದವ ನೋಡಿ ರೂಪುರುಚಿ ತೃಪ್ತಿಗಳ ಮೂಲಕ ಸ್ಥೂಲಸೂಕ್ಷ್ಮ ಕಾರಣ ಶರೀರಗಳ ಪ್ರವೇಶಿಸುವ ಪದಾರ್ಥ ಗಳನ್ನು ಶಿವಭಕ್ತಿ ಶಿವಜ್ಞಾನ ಶಿವಕ್ರಿಯೆಗಳ ಬಲದಿಂದ ಮಾಯಾ ವಿರಹಿತವಾಗಿಸಿ ಶುದ್ಧ ಸಿದ್ಧ ಪ್ರಸಿದ್ಧ ವೆಂಬ ಅನಾದಿ ಪ್ರಸಾದಿಗಳೆನಿಸುವರು. ಈ ಅನಾದಿಗಣೇಶ್ವರ ರನ್ನು ಅನಾದಿ ವೀರಶೈವ ಜಂಗಮವೆಂದು ಲಿಂಗವಂತರು ಕರೆವರು.

ಶ್ರೀ ಮಲೆ ಮಹದೇಶ್ವರರು ಈ ಅನಾದಿ ವೀರಶೈವ ಜಂಗಮಮೂರ್ತಿಯಾಗಿ ಶಿವಮಹಿಮೆಯ ಮೆರೆಯುತ್ತಾ

ಚರಿಸಿದರು. ಪರಮಪಾವನ ಈ ಜಂಗಮಮೂರ್ತಿಯ ಕೃಪಾದೃಷ್ಟಿಯೊಳಗಾದವರು ಮೋಕ್ಷಕ್ಕೊಳಗಾದರು. ಈ ಮಂಗಳಮೂರ್ತಿ ಮಹಾಜಂಗಮವು ಬಾಲ್ಯದಿಂದಲೂ ಸೇವಾಭಾವದಿಂದಲೇ ಚಲಿಸಿತು. ಪಿರಿಯಾಪಟ್ಟಣದ ಕಿಡಗಣ್ಣ ಸ್ವಾಮಿಗಳು ಹೆಸರಿಗೆ ತಕ್ಕಂತೆ ಕೋಪಾವಿಷ್ಟರು. ಮುದ್ದು ಮಾದೇಶ್ವರರು ಬಾಲ್ಯದಲ್ಲಿ ಕಿಡಿಗಣ್ಣಸ್ವಾಮಿಗಳಿಗೆ ಹೂಪತ್ರೆ ತಂದು ಶಿವಪೂಜೆಗೆ ಅಣಿ ಮಾಡುತ್ತಿದ್ದರು. ಬಾಲ ಮಹದೇಶ್ವರರ ಜೊತೆಯವರು ಗುರುಗಳ ಪೂಜೆಗೆ ಕಾಡು ಮೇಡು ಅಲೆದು ಹೂಪತ್ರೆ ತರುತ್ತಿದ್ದರು, ಮಹದೇಶ್ವರರು ಕಾಡಿನ ಕ್ರಿಮಿಗಳಾದ ಗಿದ್ದ ಗೋಸಂಬಿಗಳ ಬಳಿದುಕೊಂಡು ಹೂಬುಟ್ಟಿಗೆ ತುಂಬಿ ಶಿವಶಿವನೆಂದು ಜಲದಲ್ಲಿ ಅದ್ದಿದರೆ ಅವುಗಳೆಲ್ಲಾ ಸುಂದರ ಕುಸುಮಗಳಾಗಿ ಸುಗಂಧ ಬೀರುತ್ತಿದ್ದವು. ಬಾಲಮಾದಪ್ಪನವರ ಸಹವರ್ತಿಗಳಿಗೆ ಇದೊಂದು ಅಚ್ಚರಿಯಾಗಿತ್ತು. ಜಂಗಮದ ಜೀವಿಗಳ ಉತ್ಥಾನದಲೀಲೆ ಜಗತ್ತಿಗೆ ಅಚ್ಚರಿ. ಈ ಮಹಾಜಂಗಮ ಮಾದಪ್ಪನವರ ಹಸ್ತಸ್ಪರ್ಶದಿಂದ ಆ ಕ್ರಿಮಿಗಳ ಜೀವ ಕರ್ಮವಳಿದು ಶಿವಕುಸುಮಗಳಾಗಿ ಕಿಡಿಗಣ್ಣಸ್ವಾಮಿಗಳ ಲಿಂಗಪೂಜೆಯಲ್ಲಿ ಸೇವೆಗೊಂಡು ಶರಣ ಜನ್ಮ ಪ್ರಾಪ್ತಿಗೊಳಗಾದವು. ಈ ರೀತಿಯಲ್ಲಿ ಮುದ್ದು ಮಾದಪ್ಪನವರು ಸ್ಪರ್ಶ ಪ್ರಸಾದವನುಂಡು ದರ್ಶನಪ್ರಸಾದವನುಂಡು, ಮುದ್ದು ಮಾದಪ್ಪನ ಮಾತಿನ ಅಮೃತ ಪಾನ ಮಾಡಿದ ಅನಂತ ಕ್ರಿಮಿಗಳು ಪ್ರಾಣಿಗಳು ಮತ್ತು ಮಾಯಾವಶರಾದ ಮಾನವರು ಗಳು ಶಿವಭಕ್ತಿ ಸಂಪನ್ನರಾಗಿ ಇಂದಿನತನಕ ಲಕ್ಷ ಲಕ್ಷ ಸಂಖ್ಯೆಯಲ್ಲಿ ಶ್ರೀ ಮಹದೇಶ್ವರರ ಸೇವೆಯಲ್ಲಿ ಧನ್ಯತೆಯ ಕಾಣುತ್ತಿರುವರು. ಅನಾದಿಗಣೇಶ್ವರ ಶ್ರೀ ಮಲೆಮಹದೇಶ್ವರರು ಅನಾದಿ ಪ್ರಸಾದವನಿತ್ತು ಜೀವಿಗಳಿಗೆ ಶಿವನಿರುವ ಶಿವನೊಲಿವ ಶಿವನ ಸೇರುವ ಮಾರ್ಗವ ತೋರುತ್ತಿದ್ದಾರೆ. ಕ್ರಿಮಿಗಳ ಕುಸುಮವಾಗಿಸುವ ಈ ಲೀಲಾಪ್ರಸಂಗ ಸಾಧಕರಿಗೆ ಮಾದಪ್ಪ ನವರು ಅನುಗ್ರಹಿಸಿದ ಪ್ರಸಾದವಾಗಿದೆ.

ಲಿಂಗಪೂಜೆಗೆ ಅಂದಿನಿಂದ ಶರಣರು ವಿಭೂತಿ ರುದ್ರಾಕ್ಷಿ ಮಂತ್ರಗಳಿಗೆ ಹೆಚ್ಚು ಒಲವು ತೋರಿದ್ದಾರೆ. ಇವುಗಳನ್ನು ಲಿಂಗಪೂಜೆಯಲ್ಲಿ ಬಳಸುವಾಗ ಹೂ ಪತ್ರೆಗಳು ಸಮ್ಮಿಲನ ಗೊಳ್ಳುತ್ತದೆ. ಇಷ್ಟಲಿಂಗ ಪೂಜೆಯ ಮೂಲಕ ಕಣ್ಣಿಗೆ ಕಾಣದ ಪ್ರಾಣಲಿಂಗವ ನೋಡಿ ಭಾವನೆಗೆ ನಿಲುಕದ ಭಾವಲಿಂಗದಲ್ಲಿ ಬಯಲಾಗಬೇಕು ನಮ್ಮ ಮನದ ಆಲೋಚನೆಗಳನ್ನು ಸುಮಧುರ ಭಕ್ತಿ ಕುಸುಮಗಳಾಗಿಸಿ ಇಷ್ಟಲಿಂಗಕ್ಕೆ ಪುಷ್ಪ ಪತ್ರೆಗಳ ಮೂಲಕ ಅರ್ಪಿಸಿದರೆ ಪ್ರಾಣಲಿಂಗ ಪೂಜೆ ಯಾಗುತ್ತದೆ. ನೇರವಾಗಿ ಅರ್ಪಿಸಲಾಗದ ಭಾವನೆಗಳನ್ನು ಸುಗಂಧ ಪೂರ್ವಕ ಭಕ್ತಿ ಕುಸುಮಗಳ ರೂಪದಿ ಇಷ್ಟಲಿಂಗಕ್ಕೆ ಅರ್ಪಿಸಿದರೆ ಭಾವನೆಗಳೆಲ್ಲಾ ಭಾವಲಿಂಗದಲ್ಲಿ ಬಯಲಾಗಿ ಭಾವಲಿಂಗ ಪೂಜೆಯೆನಿಸುತ್ತದೆ. ಇಂತಹ ಅಂಗಾಂಗ ಸಾಮರಸ್ಯ ನಮ್ಮದಾಗಲು ಮಹದೇಶ್ವರರಂತಹ ಮಹಾ ಜಂಗಮದ ಕರುಣ ಪ್ರಸಾದ ಬೇಕು. ನಮ್ಮ ಮನದಲ್ಲಿರುವ ಆಸೆ, ಅಸೂಯೆ, ರೋಷ, ಮೋಸಗಳೆಂಬ ಕ್ರಿಮಿ ಕೀಟಗಳು ರೂಪಾಂತರಗೊಳ್ಳಬೇಕು. ಶಿವಯೋಗದಾಸೆ, ಇಂದ್ರಿಯಗಳ ಚಾಪಲ್ಯದ ಮೇಲೆ ಅಸೂಯೆ, ಅರಿಷಡ್ವರ್ಗಗಳ ಮೇಲೆ ರೋಷ, ಮಾಯಾಪಾಶಕ್ಕೆ ಮೋಸಗೈವ ಯುಕ್ತಿ, ನಮ್ಮದಾಗಬೇಕು. ಆಗ ನಮ್ಮ ಮನದ ತುಂಬ ಮಲ್ಲಿಗೆಯ ಪರಿಮಳವೆ. ಈ ಶಿವಮಲ್ಲಿಗೆಯ ಪರಿಮಳದಿಂದ ಭಾವನೆಗಳೆಲ್ಲ ಲಿಂಗ ಲೋಲುಪ್ತತೆಯಲ್ಲಿ ಲೋಲಗೈಯುತ್ತ ಬೊಗಸೆ ಬೊಗಸೆ ಹೂಗಳನರ್ಪಿಸಿದರೂ ಲಿಂಗದೊಲುಮೆಗೆ ಆಲಿಂಗನಕ್ಕೆ ಒಳಗಾಗದೆ ತೊಳಲಾಡುತ್ತಿರುವ ನಮ್ಮಂತಹವರಿಗೆ ಮಾದಪ್ಪ ನವರು ಬೋಧಿಸುತ್ತಿದ್ದಾರೆ. ನಿನ್ನ ಮನದಾರಣ್ಯದಲ್ಲಿ ಹರಿ ದಾಡುತ್ತಿರುವ ಕ್ರಿಮಿಕೀಟಗಳ ಮಾದಯ್ಯನ ನಾಮಬಲದಿಂದ ಕುಸುಮಗಳಾಗಿ ಮಾಡಿ ಅರ್ಪಿಸಿ ಎಂದು ನಿಮ್ಮ ಭಾವನೆಗಳ ಸುಗಂಧವ ನರ್ಪಿಸಿರೆಂದು ಅದಕ್ಕಾಗಿ ಈ ಅನಾದಿ ಜಂಗಮದ ಪ್ರಸಿದ್ಧ ಪ್ರಸಾದವ ಅವಧಾನದಿಂದ ಅಂಗೈಸಿಕೊಳ್ಳಿ ರೆಂದು, ಈ ಅನಾದಿ ಪ್ರಸಾದ ಜೀವಿಗಳ ಮನದ ಕ್ರಿಯೆಗಳ ನಾಶಗೈದು ಭಾವಕುಸುಮಗಳಾಗಿಸಿ ಭಾವಲಿಂಗ ಸಮರದ ಗೊಳಿಸುವುದು ಮಾದಪ್ಪನ ಧ್ಯಾನದಲ್ಲಿ ಮನವನುಡಿಗಿದರೆ ಮನದರಣ್ಯದ ಗೊದ್ದಗೋಸುಂಬೆಗಳು ಚೆಂದದ ಹೂಗಳಾಗುತ್ತವೆ.

ಮಾದಯ್ಯನ ದರ್ಶನ ಪ್ರಸಾದದಿಂದ ಮೈಸೂರ ಅರಸ ರಾದ ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರ ಕ್ರೂರತ್ವವು ನಾಶವಾಯಿತು. ಶ್ರೀಮನ್ಮಹಾರಾಜರು ಮಾದಯ್ಯನಗಿರಿಗೆ ಬೇಟೆಯಾಡಲು ಸಿಬ್ಬಂದಿಯೊಂದಿಗೆ ಬಂದರು. ಬೇಟೆಯೂಟ ವೆಂದರೆ ಕ್ರೂರಹಿಂಸೆಯೆ. ಹುಲಿಯೊಂದನ್ನು ಬೇಟೆಯಾಡಲು ಬೆನ್ನಟ್ಟಿಹೋದ ಮಹಾರಾಜರು ಸಿಬ್ಬಂದಿಯಿಂದ ದೂರವಾಗಿ ಕಾಡಿನ ಮಧ್ಯ ಬಂದರು. ಹುಲಿಯ ಮೇಲೆ ಮಹದೇಶ್ವರರು ದರ್ಶನವಿತ್ತು, ಅಪ್ಪಾಜಿ ಇದು ನನ್ನ ವಾಹನ ಕೊಲ್ಲಬೇಡ ವೆಂದರು. ಈ ದಿವ್ಯದರ್ಶನದಿಂದ ಮಹಾರಾಜರು ಮೂರ್ಛಿತರಾದರು. ಮಹಾರಾಜರನ್ನು ಹುಡುಕುತ್ತಾ ಬಂದ ಸಿಬ್ಬಂದಿ ಭಯಭೀತರಾದರು. ಮೂರ್ಛಿತ ಮಹಾರಾಜರಿಗೆ ಶೈತ್ಯೋಪಚಾರ ಮಾಡಿದರು. ಎಚ್ಚರಗೊಂಡ ಮಹಾ ರಾಜರು ಮಹಾಜಂಗಮದ ದರ್ಶನ ದಿಂದ ಪರಿವರ್ತಿತರಾಗಿ ಬೇಟೆಯಾಡುವುದನ್ನೇ ಬಿಟ್ಟು ಬಿಟ್ಟರು. (ಲಿಂಗೈಕ್ಯ ಸಾಹಿತಿ ಟಿ.ಎನ್. ಮಹದೇವಯ್ಯನವರು ಅವರ ಪತ್ನಿ ಸುಶೀಲಮ್ಮನವರಿಗೆ ಹೇಳುತ್ತಿದ್ದ ಪ್ರಸಂಗ) ಈ ಅನಾದಿ ಪ್ರಸಾದ ಮಹಿಮೆ ವೇದಕ್ಕೆ ವಾದಕ್ಕೆ ನಿಲುಕದ ಮಹಾಲಿಂಗ ಸ್ವರೂಪ. ಜಗದ ಜೀವಿಗಳನುದ್ಧರಿಸಲು ಅನಾದಿ ಮಹಾಜಂಗಮವು ಪ್ರಸಾದರೂಪದಲ್ಲಿಯೆ ತನ್ನ ಶಕ್ತಿಯನ್ನು ಅನುಗ್ರಹಿಸಬೇಕು. ಆದಕಾರಣ ಅನಾದಿ ಜಂಗಮಕ್ಕೂ ಜೀವನ ನ್ನುದ್ಧರಿಸುವ ಶಕ್ತಿಮಯ ಅನಾದಿ ಪ್ರಸಾದವು ಭೇದಭಾವ ವಿಲ್ಲದ ಅಭೇದವಾಗಿವೆ. ರವಿ ಬೇರೆ ಕಿರಣ ಬೇರೆ ಎನ್ನಬಹುದೇ? ಜಗವನುದ್ಧರಿಸಲವತರಿಸಿದ ಅನಾದಿ ಜಂಗಮ, ಅದರಿಂದ ಆವಿರ್ಭವಿಸಿದ ಅನಾದಿ ಪ್ರಸಾದ ಎರಡಾದರೂ ಒಂದೇ ಆಗಿವೆ.

ಅರಿವು, ಅನುಭವ, ಆನಂದ, ಸಂತೃಪ್ತಿ ಇವು ಅನಾದಿ ಗಣೇಶ್ವರ ಮಹಾಜಂಗಮದ ಜಗದುದ್ಧಾರಲೀಲೆಯಲ್ಲಿನ ಕ್ರಿಯಾಭೇದಗಳಾಗಿವೆ ಅರಿವು ಗುರುವಾಗಿ ಶಿಷ್ಯನಲ್ಲಿ ಲಿಂಗಿಸುಭಾವವ ಒಡಮೂಡಿಸಿ ಲಿಂಗವಾಗಿ, ಲಿಂಗಾನುಭಾವದ ಆನಂದ ಪರವಶತೆಯ ಜಂಗಮವಾಗಿ, ಅನಾದಿ ಪ್ರಸಾದದಿಂದ ಜೀವನ ಸಂತೃಪ್ತಿಯಲ್ಲಿ ಶಿವಸುಖವ ಸೂರೆಗೂಡುತ್ತದೆ. ಲೋಕ ಕಲ್ಯಾಣಾರ್ಥವಾಗಿ ಪರವಸ್ತುವಿನ ನುಗ್ರಹ ಪೂರ್ವಕವಾದ ಈ ಚತುರ್ವಿಧ ಸಂಪದಗಳನ್ನು ಶ್ರೀ ಮಹದೇಶ್ವರರು ಧರೆಗೆ ಕರೆತಂದಿರುವರು. ಈ ಚತುರ್ವಿಧ ಸಂಪತ್ತುಗಳು ಸವೆಯದ ಸಕಲೈಶ್ವರ್ಯದ ಮೂಲವಾಗಿವೆ/ ಜಗಕ್ಕಧಿಕವಾದುದು ಗುರುವು. ಸದ್ಗುರುವಿನ ಕೃಪೆಯಿಂದಾದ ಲಿಂಗದನುಭಾವ ಕ್ಕಿಂತ ಮಿಗಿಲಾದ ಮಂಗಳಾನುಭಾವವಿಲ್ಲ. ಸರ್ವಮಂಗಳ ಮಯ ಸುಖವ ಜಗಕ್ಕೆ ನೀಡುವುದಕ್ಕಿಂತ ಮಿಗಿಲಾದ ಜಂಗಮಾನಂದವೂ ಇನ್ನೊಂದಿಲ್ಲ. ಜಂಗಮಾ ನಂದದಿಂದ ಜಗಕ್ಕೊದಗುವ ಪ್ರಸಾದ ಪ್ರಸನ್ನತೆ ಸಂತೃಪ್ತ ಜೀವನ ಸಿದ್ಧಿ ಮತ್ತೆಲ್ಲೂ ದೊರಕುವುದಿಲ್ಲ. ಜೀವಿಗಳಿಗೆ ಜ್ಞಾನದೈಶ್ವರ್ಯವನ್ನು ಮಂಗಳಕರ ಅನುಭವವನ್ನು ಜಂಗಮದ ಆನಂದವನ್ನು ವಪ್ರಸನ್ನತೆಯ ಪ್ರಸಾದವನ್ನು ತಮ್ಮ ಜಂಗಮ ಜೋಳಿಗೆಯಿಂದ ಜೀವಿಗಳಿಗೆ ಉಣಿಸುತ್ತಾ ಸಾಗಿದ ಮಹಾ ಮಹಿಮ ಶ್ರೀ ಮಲೆಮಹದೇಶ್ವರರಿತ್ತ ಅನಾದಿ ಪ್ರಸಾದ ಜಗದೊಳು ಅವಿರಳ ಪರಂಜ್ಯೋತಿ ಸ್ವರೂಪದಿಂದ ಮಾದಯ್ಯನ ಗಿರಿಯಲ್ಲಿ ಬೆಳಗುತ್ತಿದೆ. ಒಳಬಂದು ಅಡಿಗೆರಗಿದವರ ಬಾಳ ಬೆಳಕಾಗಿದೆ. ಮಹಾಮಹಿಮ ಪುರುಷ ಮಹದೇಶ್ವರರು ಆದಿ ಪ್ರಸಾದದಿಂದ ಅನಾದಿ ಪ್ರಸಾದ ಅಭೇದ ಪ್ರಸಾದದ ನಿಲುವ ಜಗತ್ತಿಗೆ ನಿರೂಪಿಸಿ ಅವಿರಳ ಪ್ರಸಾದ ಜ್ಯೋತಿ ಲಿಂಗಸ್ವರೂಪದಿದ್ದು ಮಾದಯ್ಯನ ಗಿರಿಯಲ್ಲಿ ದಿವ್ಯ ಪ್ರಕಾಶವ ಬೀರುತ್ತಿದೆ.

ಈ ಅನಾದಿ ಪ್ರಸಾದ ಮಹಿಮೆ ಇಪ್ಪತ್ತನೆ ಶತಮಾನದಲ್ಲೇ ಶ್ರೀ ಸಿದ್ಧಗಂಗಾ ಕ್ಷೇತ್ರದ ಪರುಷಹಸ್ತದಿಂದ ಜೀವಿಗಳನುದ್ಧರಿಸಿತು.

*ಇರವಿಯ ದಂಡೆದ್ದು ಧರೆಯಲ್ಲಿ ಮುತ್ತುವುದು*
*ನರರಿರುವುದಕ್ಕೆ ನೆಲೆ ಇಲ್ಲ ತಾನೆ*
*ನರರಿರುವುದಕ್ಕೆ ನೆಲೆ ಇಲ್ಲದಂತಾಗಿ*
*ಧರೆ ಉರಿದಿರಿವಿ ಅಳಿವುದು ತಾನೆ*

(ಸಂ.ವ.ಸಂ ಎಂಟು ವಚನ ಸಂಖ್ಯೆ2256)

ಮಡಿವಾಳಪ್ಪನವರ ವಚನದ ಈ ಭಾಗವನ್ನು ಅವರವರ ಅನುಭಾವಕ್ಕೆ ತಕ್ಕಂತೆ ವಿವರಿಸಲು ಸಾಧ್ಯ. ತುಮಕೂರಿನಿಂದ ಬೆಂಗಳೂರಿಗೆ ಹೋಗುವ ರಸ್ತೆಯ ಬಲಭಾಗಕ್ಕೆ ಹತ್ತು ಕಿ.ಮೀ. ದೂರದಲ್ಲಿ ನಿಜಗಲ್ಲು ಸಿದ್ಧರಬೆಟ್ಟವಿದೆ. ಈ ಸಿದ್ಧರಬೆಟ್ಟದ ಗವಿಯಲ್ಲಿ ಅನೇಕ ಸಿದ್ಧಪುರುಷ ಸ್ಥೂಲಶರೀರ ಬಿಟ್ಟು ಸೂಕ್ಷ್ಮ ಶರೀರವಿಡಿದು ಶಿವಯೋಗ ವಿಹಾರದಲ್ಲಿದ್ದಾರೆ. ಈ ಅಂತ ರಂಗದ ಸಾಮ್ರಾಜ್ಯದ ವೈಭವದ ನಿಬ್ಬೆರಗಿನಲ್ಲಿರುವ ಮಹಿಮಾ ಪುರುಷರ ಸಂಸರ್ಗದಿಂದ ಲಕ್ಕೂರಿನ ರುದ್ರಪ್ಪನವರು ಅಂತರಂಗದ ಸಾಧನೆಯ ಸಿದ್ಧಿಗೊಡೆಯರಾಗಿ ಸಿದ್ಧಗಂಗೆಯಲ್ಲಿ ಉದ್ದಾನೇಶ್ವರರೆನಿಸಿಕೊಂಡರು. ಉದ್ದಾನೇಶ್ವರರು ರುದ್ರಪ್ಪನವರ ಹೆಸರಿನಿಂದ ಬಾಲ್ಯದಲ್ಲಿ ಮೇಕೆ ಕಾಯುವುದು ನೆಪವಾಗಿ ಸಿದ್ಧರಬೆಟ್ಟಕ್ಕೆ ಬರುತ್ತಿದ್ದರು. ಮೇಕೆ ಕಾಯುವ ನೆಪದಲ್ಲಿ ಮಹಾತ್ಮರ ಕೂಡುವುದು. ನಿಜ ಸ್ವರೂಪ ತಿಳಿವುದೇ ಲೀಲೆ. ಮೇಕೆಯನ್ನು ಬೆಟ್ಟದಲ್ಲಿ ಮೇಯಲು ಬಿಟ್ಟು ಗವಿಯ ಪ್ರವೇಶಿಸುತ್ತಿದ್ದರು. ಅಲ್ಲಿರುವ ತಪಸ್ವಿಗಳು ಈ ಬಾಲಕ ರುದ್ರಪ್ಪ ನವರಿಂದ ಲೋಕ ಕಲ್ಯಾಣ ಮಾಡಿಸಲು ಅಲೌಕಿಕ ಶಿಕ್ಷಣ ನೀಡುತ್ತಿದ್ದರು. ತಮ್ಮ ತಪಸ್ಸನ್ನೆಲ್ಲಾ ಧಾರೆಯೆರೆಯುತ್ತಿದ್ದರು. ರುದ್ರಪ್ಪನವರು ಅವರ ಮಾರ್ಗದರ್ಶನದಲ್ಲಿ ಕಾಯವಿಡಿದಾತ್ಮ ರಾಶಿಗೆ ಮೋಕ್ಷದ ತುಪ್ಪಾನ್ನದ ತುತ್ತನಿಕ್ಕುವ

ವಿದ್ಯೆಯ ಕಲಿಯ ತೊಡಗಿದರು. ನಡೆದಿರಲು ಈ ರೀತಿ ಶಿವಲೀಲೆ ಬಾಲಕ ರುದ್ರಪ್ಪನವರು ಸುಳಿದಾಡುವಲ್ಲಿ ಇರುವೆ ಸಾಲು ಕಂಡರೆ ಶಿವನಿಂದ ಬಂದ ಜೀವಿಗಳಿರಾ ಶಿವಪ್ರಸಾದ ಕೊಟ್ಟೆ ಎಂದು ಸಕ್ಕರೆಯ ನೀಡುತ್ತಿದ್ದರು. ಸಕ್ಕರೆಯ ಶಿವಪ್ರಸಾದವನುಂಡ ಲಕ್ಷಾವಧಿ ಇರುವೆಗಳಿಗೆ ಮೋಕ್ಷ ಪ್ರಾಪ್ತಿಯಾಯಿತು. ಅರಿವಿನ ಮಾನವರವತಾರವಾಯಿತು. ಈ ಅರಿವಿನ ಮಾನವರ ಸಾಲೇ ಗುರುಕೃಪಾ ಬಯಕೆ ಯಿಂದ ಸಿದ್ಧಗಂಗೆಯತ್ತ ಸಾಲಿಟ್ಟು ಬರುತ್ತಿದ್ದಾರೆ. ಮಹಾಜಂಗಮ ವರೇಣ್ಯ ಶಿವಕುಮಾರಮಹಾಸ್ವಾಮಿ ಗಳನ್ನು ಅರಸಿಕೊಂಡು ಬರುತ್ತಿರುವ ಜನರ ಹಿಂದೆ ಉದ್ದಾನೇಶ್ವರರ ಕರದಲೀಲೆ ಇದೆ. (ಕನಕಪುರದ ದೇಗುಲ ಮಠದ ಲಿಂ॥ ಶ್ರೀ ಮಹಾಲಿಂಗಸ್ವಾಮಿಗಳು ಉದ್ದಾನೇಶ್ವರ ರಿಂದ ಕೇಳಿ ನನಗೆ ಹೇಳಿದ ಯಥಾವತ್ತಾದ ನಿರೂಪಣೆ)

'ಇರವಿಯ ದಂಡೆದ್ದು ಧರೆಯೆಲ್ಲಾ ಮುತ್ತುವುದು' ಶಿವಮಯ ಜಗವೆಲ್ಲಾ ಮಾಯಾಮಿಶ್ರಣವಾಗಿ ಶಿವಜೀವ ರೆಂದು ಎರಡಾಗಿದೆ. ಮಾಯಾಮಿಶ್ರಗೊಂಡವರು ಜೀವಿಗಳೆನಿ ಸಿದರೆ ಮಾಯೆಯೆ ಹಿಂಗಳೆದವರು ಶರಣ ರಾಗಿ ಶಿವಲೀಲೆಯ ತೋರುವರು. ಜಗದೊಳಿದ್ದು ಇಲ್ಲದಂತಿರುವ ಶಿವ ಮತ್ತು ಶರಣರ ಪೂಜ್ಯ, ಪೂಜಕ ಲೀಲೆಯಾಟ ನಡೆದಿದೆ. ಪರವಸ್ತುವಿನಂಶರಾಗಿ ಬಂದ ಜೀವಿಗಳು ಬಂದುದರ ಅರಿವಿಲ್ಲರಾಗಿ ಇರುವೆಯಾಗಿ ಭೂಮಿಯನ್ನು ಮೆತ್ತಿಕೊಳ್ಳುತ್ತವೆ. ಜೀವಿಗಳಿಗೆಲ್ಲಾ ಭೂಮಿಯ, ಭೂಮಿಯ ಮೇಲಣ ಮತ್ತು ಭೂಮಿ ಗೊಳಗಣ ವಸ್ತುಗಳದೇ ಚಿಂತೆ. ಈ ವಸ್ತುಗಳಿ ಗಾಗಿಯೇ ಹೋರಾಟ. ಅದರಲ್ಲೇ ಮರಣ. ಇರುವೆ ಭೂಮಿ ಯಲ್ಲೇ ಹುಟ್ಟಿ ಭೂಮಿಯಲ್ಲೇ ಸಾವಂತೆ ಜೀವಿಗಳೆಲ್ಲಾ ಪರವಸ್ತುವಿನ ಮರೆತು ಭೂಸಂಪತ್ತಿಗಾಗಿ ಹುಟ್ಟಿ ಸಾಯುತ್ತ ಭವರಾಟಾಳದಲ್ಲಿ ಬಸವಳಿಯುತ್ತಿರುವರು. ಈ ಜೀವರೆಂಬ ಇರುವೆಗಳಿಗೆ ನಾನಾರೆಂಬ ಅರಿವುಂಟಾದರೆ ನರ ರಾಗುತ್ತಾರೆ. ಧರೆಯ ಆಳಬಲ್ಲವರಾಗುತ್ತಾರೆ. ಹರನ ಕೂಡುವರಾಗುತ್ತಾರೆ. ಜೀವಿಗಳೆಲ್ಲಾ ಅರಿವಿಲ್ಲದವರಾಗಿ ಇರುವಿಗಳಾಗಿ ಧರೆಯನ್ನು ಧರೆಯ ವೈಭೋಗದಲ್ಲಿ ಸಮಭಾಗಿಗಳಾಗಿ ಭವರೋಗಿ ಗಳಾಗಿರುವ ಕಾರಣ ಧರೆಯನ್ನು ಮೆತ್ತಿರುವರಾಗಿದ್ದರೆ ಧರೆಯು ಕೂಡ ದೇವ ಭಕ್ತರ ಪೂಜ್ಯ ಪೂಜಿತ ಲೀಲೆಯ ರಂಗಮಂದಿರ. ಆದರೆ ಅರಿವಿನ ಸಕ್ಕರೆಯ ಈ ಜೀವ ಇರುವೆಗಳಿಗೆ ಉಣಿಸುವ ಗುರು ಅವತರಿಸದರೆ ನರರಾಗುವುದಕ್ಕೆ ಧರೆಯಲ್ಲಿ ನೆಲೆ ಇಲ್ಲದಾಗಿದೆ. ಇದನ್ನೇ ನರ–ನಾರಾಯಣ, ಪರಮಾತ್ಮ–ಜೀವಾತ್ಮ, ಶಿವ–ಜೀವ, ಅಂಗ–ಲಿಂಗ ಎಂದೆಲ್ಲಾ ಕರೆದಿದ್ದಾರೆ. ನರನಾದ ಅರ್ಜುನನಿಗೆ ನಾರಾಯಣನಾದ ಕೃಷ್ಣ ಗೀತೆ ಉಪದೇಶ ಮಾಡಿ ಜೀವನ ಹೋರಾಟವ ಗೆಲಿಸಿದ. ಪರಮಾತ್ಮ ಜೀವಾತ್ಮನ ಭಕ್ತಿ ಪರವಶತೆಗೆ ಮಾರು ಹೋದ. ಶಿವ ಜೀವನ ಧ್ಯಾನ, ಜ್ಞಾನ ಯೋಗಗಳಲ್ಲಿ ಕೂಡಿಕೊಂಡ. ಲಿಂಗ ಅಂಗದ ಷಡ್ವಿಧ ಅರ್ಚನರ್ಪಣಗಳ ಷಡ್ವಿಧ ಪ್ರಸಾದರೂಪದಲ್ಲಿ ಸಮರಸ ಗೊಂಡ. ಈ ಮೇಲಿನ ಎಲ್ಲಾ ಕ್ರಿಯೆಗಳು ಗುರುಮುಖ ವಾಗಿಯೇ ನರನೆಂಬುವನಿಗೆ, ಜೀವಾತ್ಮರಿಗೆ ಜೀವನೆನಿಸಿ ಕೊಂಡವರಿಗೆ ಅಂಗನೆನಿಸಿದವನಿಗೆ ಒದಗುವುದು. ಉದ್ದಾನೇಶ್ವರರು ಧರೆಯ ಮುತ್ತಿಗೆಯಲ್ಲಿ ಸೋತು ಸಾವಗೆಲ್ಲಲಾಗದ ಇರುವೆ ಜೀವಿಗಳಿಗೆ ಪ್ರಸಾದವಿತ್ತು ಅರಿವಿನ ನರಜನ್ಮವ ಅನುಗ್ರಹಿಸಿದರು ನರರುಗಳು ಹರನ ಸುಖವ ಬೇಡುತ್ತ ಸಿದ್ಧಗಂಗೆಯತ್ತ ಸಾಲಿಟ್ಟು ಬರುತ್ತಿದ್ದಾರೆ.

'ನರರಿರುವುದಕ್ಕೆ ನೆಲೆ ಇಲ್ಲಿ ತಾನೆ'

ಹರನು ನರರಿಗಾಗಿ ಧರೆಯನ್ನು, ಧರೆಯಲ್ಲಿ ಶಿವಸುಖ ಸಮೃದ್ಧಿಯ ಅಮೃತ ಬೆಳೆಸನಿತ್ತಿದ್ದಾನೆ. ನರನು ಈ ಅಮೃತ ಬೆಳಸಿನ ಅರಿವಿಲ್ಲದೆ ಜೀವಭಾವದಿಂದ ಮಣ್ಣಿಗಾಗಿ ಮಣ್ಣಿನಲ್ಲಿ ದೊರಕುವ ಮಿಸುನಿ (ಚಿನ್ನ) ಬೆಳ್ಳಿಗಾಗಿ ಹೋರಾಡುತ್ತಿದ್ದಾನೆ. ಧರೆಯ ಮೇಲೆ ಮೂಡುವ ಕಾಮನಬಿಲ್ಲಿನ ವರ್ಣದ ಅಧಿಕಾರಕ್ಕಾಗಿ ಮಾರುಹೋಗಿ ಮೈಮರೆತ್ತಿದ್ದಾನೆ ತೋರಿಮರೆಯಾಗುವ ಬಾಲ್ಯ ಯೌವ್ವನದ ಅಸಂಬದ್ಧ ಲೀಲೆಗಳಲ್ಲಿ ಸಲೆ ಬಂಧಿಯಾಗಿದ್ದಾನೆ. ಉದ್ದಾನ ಗುರುಗಳಂತಹ ಮಹಿಮರು ಬಂದು ನರನ ಮೃಣ್ಮಯ ಕಾಯದಲ್ಲಿ ಚಿನ್ಮಯನ ತೋರುವ ತನಕ ಶರಣಭಾವ ಮೂಡುವುದಿಲ್ಲ. ಆಗಸದಲ್ಲಿ ಉದಿಸಿ ಕೈಗೆ ಸಿಗದೆ ಮರೆಯಾಗುವಂತಹ ಅಧಿಕಾರದ ಇಂದ್ರ ಚಾಪದ ಮೋಹ ಗುರುಕೃಪೆಯಿಂದ ಪರಿಹಾರವಾಗಿ ಹರಸುಖದ ದಾಹ ನರರಿಗೆ ಉಂಟಾಗುತ್ತದೆ. ಅನಾದಿ ಜಂಗಮದ ಸುಪ್ರಸಾದ ಉಣ್ಣುವುದರಿಂದ ಬಾಲ್ಯ ಯೌವ್ವನದ ಅಸಂಬದ್ಧ ಲೀಲೆಗಳು ಷಟ್‌ಸ್ಥಲ ಸಂಬಂಧ ಲಿಂಗಲೀಲೆಗಳಾಗುತ್ತವೆ. ಮನುಷ್ಯನಲ್ಲಿ ಅರಿವು ಉಂಟಾಗದಿರೆ ಪಶು ಪ್ರಾಣಿಗಳಂತೆ ಜೀವಿಸುತ್ತಾನೆ. ಗುರುಕರುಣಿಸುವ ತನಕ ಕಾಣಲಾಗುವುದಿಲ್ಲ ಎಂಬುದನ್ನು 'ನರರಿಗಿರುವುದಕ್ಕೆ ನೆಲೆ ಇಲ್ಲಿ' ಎನ್ನುತ್ತದೆ ಈ ಸಾಲು. ನರರಿರುವುದಕ್ಕೆ ನೆಲೆ ಇಲ್ಲದಂತಾಗಿ, ಧರೆ ಉರಿದಿರಿವಿ ಅಳಿವುದು ತಾನೆ'.





ನರನಿಗೆ ನಾನಾರೆಂಬ, ಬಂದುದೇಕೆಂಬುದು ತಿಳಿಯ ಲೆಂದು ಬ್ರಹ್ಮಾಂಡದ ಸಾರವಾದ ಪಿಂಡಾಂಡವೆಂಬ (ದೇಹ) ಕರ್ಪೂರವ ಉದ್ದಾನ ಗುರುವಂತವರಡಿಗೆ ದಿಂಡುಗೆಡವಲು ಮಹಾಮಹಿಮರ ಕರುಣೆಯ ಕಿರಣತಾಗಿ ಅರಿವಿನ ಜ್ಯೋತಿ ಯಾಗಿ ಉರಿದು ದೇಹ ಭಾವ ವಳಿಯುತ್ತದೆ. (ಧರೆ ಉರಿದು ಹೋಗುತ್ತದೆ) ಶಿವಭಾವ ಮೂಡುತ್ತದೆ. ಶಿವಭಾವ ಮೂಡಿ ಅನಾದಿ ವೀರಶೈವ ಶರಣನ ಲೀಲೆ ಪ್ರಾರಂಭವಾಗುತ್ತದೆ.

ಶ್ರೀ ಮಲೆ ಮಹದೇಶ್ವರರ ಬಾಲ್ಯದ ಲೀಲಾ ಪ್ರಸಂಗದಲ್ಲಿ ಗೊದ್ದ ಗೋಸಂಬೆಗಳು ಕುಸುಮಗಳಾದದ್ದು ಮತ್ತು ಶ್ರೀ ಉದ್ದಾನೇಶ್ವರರು ಬಾಲಲೀಲೆಯಲ್ಲಿ ಇರಿವೆ ಸಾಲಿಗೆ ಸಕ್ಕರೆಯ ಶಿವಪ್ರಸಾದವಿತ್ತುದು ಈ ಮೇಲಿನ ಎರಡು ಪ್ರಸಂಗಗಳಲ್ಲಿ ಸಾಮ್ಯವಿದೆ, ಶಿವಲೀಲೆ ಇದೆ, ಜೀವಿಗಳಾತ್ಮೋದ್ಧಾರದ ನೆಲೆ ಯಾಗಿದೆ. ಶ್ರೀ ಮಹದೇಶ್ವರರು ಜೀವಭಾವದ ಗೊದ್ದ ಗೋಸಂಬಿಗಳನ್ನು ಕುಸುಮಗಳಾಗಿಸಿ ಗುರುಸೇವೆಯಲ್ಲಿ, ಮೋಕ್ಷಕಾಣುವಂತೆ ಮಾಡಿ, ಅರಿವಿನ ಮಾನವರಾಗುದಿಸುವ ಅವಕಾಶ ಕಲ್ಪಿಸಿದರು. ಉದ್ದಾನೇಶ್ವರರು ತಲೆ ತಗ್ಗಿಸಿ ಸಾಲು ಸಾಲಾಗಿ ಕಾಲನ ಕಾಳ್ತುಳಿತದಲ್ಲಿ ನಾಶವಾಗುವ ಇರುವೆ ಸಾಲುಗಳಿಗೆ ಅನಾದಿ ಜಂಗಮದ ಪ್ರಸಿದ್ಧ ಪ್ರಸಾದ ಸಕ್ಕರೆ ಯನಿತ್ತು ಮೋಕ್ಷವ ಕರುಣಿಸಿ ಧರೆ ತುಂಬ ಅರಿವಿನ ಶರಣರಿಗೆ ನೆಲೆ ಮನೆ ಮಾಡಿಕೊಟ್ಟರು. ಈ ಇಬ್ಬರು ಮಹಾನು ಭಾವರುಗಳಿಂದ ಮೋಕ್ಷಪ್ರಾಪ್ತಿ ಹೊಂದಿ ಮಾನವರಾಗಿ ಉದಿಸಿದವರೆಲ್ಲಾ ಮನೆ ಮಾರುಗಳ ಮೋಹಕ್ಕಿಂತ ಮಿಗಿಲಾಗಿ ಮಾದಯ್ಯನ ಗಿರಿಯ ಮೋಹವುಳ್ಳವರಾಗಿ ಸಾಗುತ್ತಿದ್ದಾರೆ. ಸಿದ್ಧಗಂಗೆಯತ್ತ ಎದ್ದೆವೋ ಬಿದ್ದೇವೋ ಎಂದು ಬಾಲಕರು, ಪಾಲಕರು, ಅಧಿಕಾರದಲ್ಲಿರುವವರು, ಅಧಿಕಾರ ಬಯಸುವವರು, ಆಶ್ರಿತರು, ನಿರಾಶ್ರಿತರು ಅವರಿವರೆನ್ನದೆ ಸಿದ್ಧಗಂಗೆಯತ್ತ ಧಾವಿಸುತ್ತಿದ್ದಾರೆ. ಬಂದವ ರಿಗೆಲ್ಲಾ ನಿರ್ಮಾಯ ಗಣೇಶ್ವರ ಸಿದ್ಧಲಿಂಗೇಶ್ವರ ಹಾಗೂ ಚರ ಜಂಗಮ ಚಕ್ರವರ್ತಿ ಅಟವೀಶ್ವರ ಮತ್ತು ಸಿದ್ಧಿಯ ಮಹಾಪುರುಷ ಶ್ರೀ ಉದ್ದಾನೇಶ್ವರರ ಕರುಣ ಪ್ರಸಾದ ವನುಣಿಸಿ ಪೊರೆಯುತಿದೆ ಅನಾದಿ ವೀರಶೈವ ಜಂಗಮ ವರೇಣ್ಯಾದಿ ಶಿವಕುಮಾರ ಮಹಾಸ್ವಾಮಿರೂಪದಿ.

*

## ತಿರುಕ್ಕುರಳ್

ಕನ್ನಡ ಅನುವಾದ : ನ. ಮುನಿಸ್ವಾಮಿ

ಅಧ್ಯಾಯ –೧೧

### ಉಪಕಾರ ಸ್ಮರಣೆ

ಪ್ರತಿಫಲಾಪೇಕ್ಷೆಯಿಲ್ಲದೆ ಉಪಕಾರವ ಮಾಡಿದವಗೆ
ಭೂಸ್ವರ್ಗವನಿತ್ತರೂ ಸಮವಾಗದು

ಸಕಾಲದಲಿ ಮಾಡಿದುಪಕಾರವು ಅಲ್ಪವಾದರೂ
ಅದು ಭೂಲೋಕಕ್ಕಿಂತ ಅತಿ ಹಿರಿದು.

ಪ್ರತಿಫಲವ ಗಣಿಸದೆ ಮಾಡಿದುಪಕಾರದ ಹಿರಿಮೆಯನು,
ಅಳೆದರದು ಜಲಧಿಗಿಂತ ಹಿರಿದು

ನವಣೆಯನಿತು ನೆರವನಿತ್ತರೂ ತಾಳೆಯ ಮರದನಿತು
ಭಾವಿಪರು ಅದರ ಫಲವನರಿತವರು.

ಉಪಕಾರವನು ಪ್ರತಿ ಉಪಕಾರದಿಂದ ಅಳೆಯಲಾಗದು;
ಅದು ಉಪಕಾರವನು ಪಡೆದವನ ಯೋಗ್ಯತೆಯಷ್ಟಿಹುದು.

ಮರೆಯ ದಿರು ಕುಂದಿಲ್ಲದರ ಮೈತ್ರಿಯನು; ತೊರೆಯದಿರು
ಸಂಕಟದಿ ನೆರವಿತ್ತವರ ನೇಹವನು.

ಕೃತಜ್ಞರು ಏಳೇಳು ಜನ್ಮಗಳಲೂ ನೆನೆವರು ತಮ್ಮ
ಕಷ್ಟವನು ಕಳೆದವರ ಕೆಳೆತನವ.

ಉಪಕಾರವ ಮರೆವುದು ಲೇಸಲ್ಲ; ಅಪಕಾರವ
ಅಂದೇ ಮರೆವುದು ಲೇಸು.

ಕೊಲುವಂಥ ಕೆಡುಕನೆಸಗಿದರೂ ಅವರು ಮಾಡಿದ
ನೆರವನೊಂದನು ನೆನೆಯೆ ಮರೆವುದದು.

ಯಾವ ಧರ್ಮವನು ಮರೆತವಗೂ ಉಳಿವುಂಟು;
ಉಳಿವಿಲ್ಲ ಮಾಡಿದುಪಕಾರವ ಮರೆತವಗೆ.





# ಮೈಸೂರು ಜಿಲ್ಲೆಯ ಶರಣ ಕ್ಷೇತ್ರಗಳು-ದೇವನೂರು

-ಡಾ|| ಕೆ.ಎಸ್. ರತ್ನಮ್ಮ
೨೮೮೪, ಕೋರ್ಟ್ ಹಿಂಭಾಗ, ಸರಸ್ವತಿಪುರಂ,
ಮೈಸೂರು.

ಕರ್ನಾಟಕವು ಶಿವಶರಣರ ತೌರು. ೧೨ನೆಯ ಶತಮಾನದ ಶರಣರ ಕಾಯಕ-ದಾಸೋಹ-ಶಿವಾನುಭವಗಳ ತತ್ವಾನುಯಾಯಿಗಳು ನಾಡಿನಾದ್ಯಾಂತ ಹರಡಿ ಹೋಗಿದ್ದಾರೆ. ಅವರ ಜೀವನ-ಸಂದೇಶಗಳು-ಬಾಳಿಬದುಕಿದ ಕ್ಷೇತ್ರಗಳು ಜನಮನವನ್ನು ತಿದ್ದಿ ಬಾಳಿಗೆ ಸ್ಫೂರ್ತಿ ನೀಡುತ್ತಿವೆ. ಜಾಗೃತ ಸ್ಥಾನಗಳಾಗಿ ಇಂದಿಗೂ ಮಹಿಮೆಯನ್ನು ಬೀರುತ್ತಿವೆ. ವಿಶಿಷ್ಟ ಜೀವನ - ಸಂಸ್ಕೃತಿಯ ಇಂತಹ ತಾಣಗಳು ಮೈಸೂರು ಜಿಲ್ಲೆಯಲ್ಲಿ ಪ್ರಸಿದ್ಧವಾಗಿವೆ. ಅವುಗಳಲ್ಲಿ ದೇವನೂರು, ಸುತ್ತೂರು, ಮಹದೇಶ್ವರ ಬೆಟ್ಟ, ಶಂಭುಲಿಂಗನ ಬೆಟ್ಟ, ಮಲ್ಲನಮೂಲೆ, ಕಪ್ಪಡಿ, ಕೆಂಡಗಣ್ಣ ಸ್ವಾಮಿ ಗದ್ದುಗೆಗಳು ಪ್ರಮುಖವಾಗಿವೆ.

**ದೇವನೂರು:** ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ದೊಡ್ಡ ಕವಲಂದೆ ಹೋಬಳಿಯಲ್ಲಿ ಇರುವ ಗ್ರಾಮ ದೇವನೂರು. ಮೈಸೂರು ನಗರದಿಂದ ದಕ್ಷಿಣ ಭಾಗಕ್ಕೆ ಸುಮಾರು ೪೦ ಕಿ.ಮೀ. ನಂಜನಗೂಡಿನಿಂದ ಪೂರ್ವದಿಕ್ಕಿಗೆ ಸು. ೧೪ ಕಿ.ಮೀ. ದೂರದಲ್ಲಿದೆ.

ಈ ಗ್ರಾಮದ ಹೆಸರು ತನ್ನದೇ ಸ್ಥಳ ವಿಶಿಷ್ಟತೆಯನ್ನು, ಮಹಿಮೆಯನ್ನು ಅಳವಡಿಸಿಕೊಂಡಿದೆ. ಯಾವುದೇ ಪೌರಾಣಿಕ, ಐತಿಹಾಸಿಕ ದಾಖಲೆಯ ಮಾಹಿತಿ ಇಲ್ಲವಾದರೂ ಗ್ರಾಮದ ಹೆಸರೇ ಅರ್ಥಪೂರ್ಣವಾಗಿದೆ. ದೇವನ +ಊರು= ದೇವನೂರು. ಎಂದರೆ ದೇವರು ನೆಲೆಸಿರುವ ಊರು ಎಂಬ ಅರ್ಥವಿದೆ. ಜತೆಗೆ ಈ ಗ್ರಾಮದಲ್ಲಿ ಹರಿಹರರೆಂಬ, ಹೆಣ್ಣು ಗಂಡು ದೇವರುಗಳು ಎಂಬ ಭೇದವಿಲ್ಲದೆ ಅನೇಕ ದೇವಾಲಯಗಳಿವೆ. ಸುಮಾರು ಹದಿನೇಳು ವಿವಿಧ ದೇವರು ಗಳ ದೇವಸ್ಥಾನಗಳು ಇದ್ದು, ಇಂದಿಗೂ ನಿತ್ಯ ಪೂಜೆಗೊಳ್ಳುತ್ತಿವೆ. ಇವೆಲ್ಲಕ್ಕೂ ಕಳಶಪ್ರಾಯವಾದದ್ದು, ಮಹಾತ್ಮ ಶರಣ ಗುರುಮಲ್ಲೇಶ್ವರ ಮಹಾ ಸಂಸ್ಥಾನ ದಾಸೋಹ ಮಠ ಸ್ಥಾಪನೆಯಾಗಿರುವುದು ಈ ಭಾಗದಲ್ಲಿ ಗುರುಮಲ್ಲೇಶ್ವರರ ಪ್ರಭಾವ ಇಂದಿಗೂ ದಟ್ಟವಾಗಿ ವ್ಯಾಪಿಸಿದೆ. ನಿತ್ಯವೂ ನೂರಾರು ಭಕ್ತರು ಮಠಕ್ಕೆ ಬಂದು ಪೂಜೆ ಸಲ್ಲಿಸಿ ಪ್ರಸಾದ ಸ್ವೀಕರಿಸುತ್ತಿದ್ದಾರೆ. ಕಂಥೆ ಭಿಕ್ಷೆ ಕಾಯಕದಿಂದ ನಿತ್ಯ ದಾಸೋಹ ಅನುಷ್ಠಾನ ನಡೆಸುತ್ತಿರುವುದರಿಂದ ಈ ಗ್ರಾಮಕ್ಕೆ ದೇವನ ಊರು, ದೇವನೂರು ಎಂಬ ಹೆಸರು ಔಚಿತ್ಯಪೂರ್ಣವಾಗಿ ಹೊಂದುತ್ತಿದೆ.

**ಪ್ರಾಚೀನತೆ :** ಈ ಗ್ರಾಮದ ಪ್ರಾಚೀನತೆ ವಿಜಯನಗರ ಅರಸರ ಕಾಲಕ್ಕೆ ಹೋಗುತ್ತದೆ. ವಿಜಯನಗರದ ಅರಸರ ಆಡಳಿತಾವಧಿಯಲ್ಲಿ ಶ್ರೀ ಉಮ್ಮತ್ತೂರು ಸಂಸ್ಥಾನಕ್ಕೆ ಸೇರಿದ ಒಂದು ಮಾಂಡಲಿಕ ಗ್ರಾಮ ದೇವನೂರು. ಇದನ್ನು ಶ್ರೀ ನರಸಿಂಹ ಬಲ್ಲಾಳ ಎಂಬ ಸಾಳುವ ವಂಶಸ್ಥ ದೊರೆ ಆಳುತ್ತಿದ್ದನು. ನಂತರ ಪುರವರಾಧೀಶ್ವರರಾದ ಶ್ರೀ ಲಿಂಗರಾಜ ಅರಸು ಆಳಿದನೆಂಬ ಇತಿಹಾಸವಿದೆ. ಈ ವಿಷಯಕ್ಕೆ ಆಧಾರ ಎಪಿಗ್ರಾಫಿಯಾ ಕರ್ನಾಟಕ ನಂ.ಗೂ ೧೨೪ರ ದೇವನೂರು ಪುರದ ಬಸಪ್ಪನ (ಪುರದಯ್ಯನ ದೇವಾಲಯದ ಸಮೀಪದಲ್ಲಿರುವ) ಕಲ್ಲಿನ ಶಾಸನದಿಂದ ತಿಳಿದು ಬರುತ್ತದೆ. ಈ ಗ್ರಾಮಕ್ಕೆ ಹಿಂದೆ ದ್ಯಾವನೂರು ಸೋಮಳ್ಳ, ಮಿಣ್ಣಂಬಳ್ಳ. ಒಳಕೋಟ್ಗೆ, ಎತ್ನಟ್ಟಿ, ಹಳ್ಳದಕೇರಿ, ಮೇಗಲಕೇರಿಗಳೆಂಬ ಸಣ್ಣಪುಟ್ಟ ಉಪ ವಿಭಾಗಗಳು ಸೇರಿದವು. ಲಿಂಗರಾಜರ ಆಡಳಿತಾನಂತರ ಬದಲಾವಣೆಗಳಾಗಿವೆ. ಪ್ರಮುಖ ಗ್ರಾಮವಾಗಿ ಪ್ರಸಿದ್ಧಿ ಪಡೆದಿದೆ.

ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ಕಂಡು ಬರುವ ಶರಣ ಶ್ರೇಷ್ಠ ಸಲೀಲಾ ಮಹಾತ್ಮರೆನಿಸಿದ ಶ್ರೀ ಗುರುಮಲ್ಲೇಶ್ವರರು ಬಸವ ತತ್ವಗಳನ್ನು ಜನತೆಗೆ ಮುಟ್ಟಿಸಿ, ಧಾರ್ಮಿಕತೆ, ನೈತಿಕತೆಯ ಪುನರುತ್ಥಾನ ಮಾಡಿದರು. ಇವರ ಸ್ಥಳ ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ನ್ಯಾಮತಿಯ ಬಳಿ ಇರುವ ಚವುಳಂಗ ಎಂಬ ಗ್ರಾಮದ ನಂದಿ ಬಸವಾರ್ಯ ಮತ್ತು ಶರ್ವಾಣಮ್ಮ ಎಂಬ ಶಿವಭಕ್ತ ದಂಪತಿಗಳ ಸುಪುತ್ರರಾದ ಇವರು ಸುಮಾರು ಕ್ರಿ.ಶ. ೧೮೨೮ರ ಅವಧಿಯಲ್ಲಿ ಜನಿಸಿ ಗುರುಮಲ್ಲಪ್ಪ ಎಂಬ ಹೆಸರಿನಲ್ಲಿ ಬಾಲ್ಯದಲ್ಲಿ ವಿದ್ಯಾಭ್ಯಾಸ ಮಾಡಿದರು. ಶರಣಪ್ಪ ದಂಪತಿಗಳು ಮೈಸೂರಿಗೆ ಬಂದು ಹೋಗುತ್ತಿದ್ದುದಲ್ಲದೆ, ಅಲ್ಲಿನ ವೀರಶೈವ ಮಠಗಳಿಗೆ ಹೋಗಿ ಗುರುಜಂಗಮರಿಗೆ ಭಕ್ತಿ ಅರ್ಪಿಸಿ ಹೋಗು









ತ್ತಿದ್ದರು. ಶಿವಮೊಗ್ಗ ಪ್ರಾಂತ್ಯದಲ್ಲಿ ಕ್ಷಾಮ ಉಂಟಾದಾಗ ಸಂಸಾರ ಸಮೇತ ಮೈಸೂರಿಗೆ ಬಂದು ಕುದೇರು ಮಠದ ಮಧ್ಯೆ ಇರುವ ಚೌಕಿ ಮಠದಲ್ಲಿದ್ದ ಶ್ರೀ ಶರಣಪ್ಪ ಸ್ವಾಮಿಗಳ ಭಕ್ತರಾದರು. ಗುರುಮಲ್ಲಪ್ಪನಿಗೆ ಶ್ರೀಗಳ ಕಾಲಾನಂತರ ಬಂದ ಬೆತ್ತಲೆಗುಡಸ್ವಾಮಿಗಳು ಗುರುಗಳಾಗಿ ತಮ್ಮ ತಪ್ಪಶ್ಶಕ್ತಿಯನ್ನು ಧಾರೆಯೆರೆದು 'ಗುರುಮಲ್ಲೇಶ್ವರ' ಎಂಬ ಅಭಿದಾನದಿಂದ ತಮ್ಮ ಶಿಷ್ಯನನ್ನಾಗಿ ಮಾಡಿ ಕೊಂಡರು. ಮಠದ ಧಾರ್ಮಿಕ ಕಾರ್ಯಗಳು, ದಾಸೋಹ ಕಾರ್ಯಗಳ ಜೊತೆಗೆ ಕಂಥೆ ಭಿಕ್ಷದ ಕಾಯಕಕ್ಕೆ ತೊಡಗಿಸಿ, 'ಮಹಾದಾಸೋಹ ಚಕ್ರವರ್ತಿ'ಯಾಗೆಂದು ಹರಸಿ ಲಿಂಗೈಕ್ಯರಾದರು.

ಶಿವಯೋಗ ಸಾಧಕರೂ ಯೋಗಪಟುವೂ ಆದ ಇವರು ಸತತ ಹನ್ನೆರಡು ವರ್ಷಗಳ ಲಿಂಗಾನುಷ್ಠಾನ, ಧ್ಯಾನಗೈದರು. ಗುರುಕೊಟ್ಟ ಜೋಳಿಗೆ ಹೆಗಲಿಗೇರಿಸಿ ಮುಖ ಕಾಣುವಂತೆ ಬಿಟ್ಟು ಇಡೀ ಶರೀರವನ್ನು ಕಂಬಳಿಯಿಂದ ಹೊದ್ದು, ಕಾಲಿಗೆ ಜಂಗು ಕಟ್ಟಿ ಕೈಯಲ್ಲಿ ಗೆಜ್ಜೆ ಸದ್ದು ಮಾಡುವ ಕೋಲು ಹಿಡಿದು ಭಿಕ್ಷದ ಕಾಯಕಕ್ಕೆ ಹೊರಡುತ್ತಿದ್ದರು. ಈ ವೇಷದಲ್ಲಿ ಅವರು ಶಿವನ ಭಿಕ್ಷಾಟನಾ ಲೀಲೆಯನ್ನು ನೆನಪಿಸುವ ಜಂಗಮರಾಗಿ ಸಾಕ್ಷಾತ್ ಪರಶಿವನೇ ಆಗಿರುತ್ತಾರೆ ಎಂದೂ, ನಡೆದಾಡುವ ದೇವರೂ ಎಂದೂ ಭಾವಿಸಿದರು. ಅರಮನೆಯಿಂದ ಹಿಡಿದು ಅನೇಕ ಭಕ್ತರ ಮನೆಗಳಿಗೆ ಹೋಗಿ ಅಲ್ಲಿ ನೀಡಿದ ಎಡೆಯನ್ನು ಲಿಂಗಕ್ಕೆ ನೈವೇದ್ಯ ಮಾಡಿ ಮಠಕ್ಕೆ ಬರುತ್ತಿದ್ದ ಗುರುಜಂಗಮರಿಗೆ, ಅಂಗವಿಕಲರಿಗೆ, ದೀನದಲಿತರಿಗೆ ಬಡಿಸುತ್ತಿದ್ದರು. ಇಂತಹ ಕಾಯಕನಿಷ್ಠ ತಪೋಯೋಗಿ ಅಲೌಕಿಕ ಅದ್ಭುತ ಶಕ್ತಿಯನ್ನು ಪಡೆದು ಪವಾಡ ಪುರುಷರಂತೆ ಖ್ಯಾತಿ ಪಡೆದರು.

**ಕರುಳ ಪವಾಡ :** ಒಮ್ಮೆ ಮಹಾಲಿಂಗೇಶ್ವರ ಮಠದಲ್ಲಿ ಶಿರಸ್ಸನ್ನು ಕತ್ತರಿಸಿ, ಆರತಿ ಮಾಡಿದ ಹೊಡೆಹುಲ್ಲ ಬಂದಯ್ಯನೆಂಬ ಶರಣರ ಬಗ್ಗೆ ವ್ಯಂಗ್ಯವಾಡಿದ ಜನರಿಗೆ 'ಇಂದೂ ಶರಣರಿದ್ದಾರೆ' ಎಂದು ತಮ್ಮ ಬಳಿ ಇದ್ದ ಚಾಕುವಿನಿಂದ ತಮ್ಮ ಹೊಟ್ಟೆಯನ್ನು ಸೀಳಿ ಕರುಳನ್ನು ತೆಗೆದು ಕೊರಳಿಗೆ ಮಾಲೆ ಹಾಕಿಕೊಂಡರು. ಆಗ ಅಲ್ಲಿದ್ದ ಜನರು ಕ್ಷಮೆ ಯಾಚಿಸಿದ್ದು ತಿಳಿದು ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಮಹಾಲಿಂಗೇಶ್ವರ ಮಠಕ್ಕೆ ಧಾವಿಸಿ ಬಂದು ಗುರುಗಳ ಮುಂದೆ ಶರಣರು ಇಂದೂ ಇದ್ದಾರೆ ಎಂದು ಅಪರಾಧವನ್ನು ಮನ್ನಿಸಬೇಕೆಂದು ಕೇಳಿದರು. ನಂತರ ಕರುಳನ್ನು ಉದರದೊಳಗೆ ಸೇರಿಸಿಕೊಂಡ ಅವರು 'ಶರಣರಿಗೆ ಮರಣವಿಲ್ಲ. ಶರಣರ ಬಗ್ಗೆ ಅಪಶಬ್ಧಗಳನ್ನು ಆಡಬಾರದೆಂದು ಬುದ್ಧಿ ಹೇಳಿದರು. ಹೀಗೆ ಕರುಳ ಪವಾಡದ 'ಸ್ವಲೀಲಾ ಮಹಾತ್ಮ ಗುರುಮಲ್ಲೇಶ್ವರರು' ಎಂದು ಮನೆ ಮಾತಾದರು. ಇದಲ್ಲದೆ ಇಂತಹ ನೂರಾರು ಪವಾಡಗಳನ್ನು ಅವರು ಮಾಡಿ ಶರಣಶಕ್ತಿಯ ಬಗ್ಗೆ ಜನರಲ್ಲಿ ನಂಬಿಕೆ ದೃಢಪಡಿಸಿದರು.

**ಮೈಸೂರು ಮಹಾರಾಜರು ಸಲ್ಲಿಸಿದ ಕೂಲಿ :** ಮಹಾಶರಣ ಶ್ರೇಷ್ಠರೆನಿಸಿದ್ದ ಶ್ರೀ ಗುರು ಮಲ್ಲೇಶ್ವರರ ದರ್ಶನ ಪಡೆಯಲು ಮೈಸೂರು ಮಹಾರಾಜರು ಬಂಗಾರದ ತಟ್ಟೆಯಲ್ಲಿ ಮುತ್ತುರತ್ನ ತುಂಬಿಕೊಂಡು ಹೋಗಿ ಅರ್ಪಿಸಿದಾಗ ಅದು ಕಾಯಕದಿಂದ ಬಂದದ್ದಾಗಿದ್ದರೆ ಮಾತ್ರ ಸ್ವೀಕರಿಸುತ್ತೇವೆ ಎಂದು ಹಿಂದಿರುಗಿಸಿದ್ದರು. ನಂತರ ಮಹಾರಾಜರು ಮಾರುವೇಷ ಧರಿಸಿ ಕಮ್ಮಾರನ ಕುಲುಮೆಯಲ್ಲಿ ದುಡಿದು ಬಂದ ಕೂಲಿಯನ್ನು ಅವರಿಗೆ ಅರ್ಪಿಸುವ ಮೂಲಕ ಸ್ವಂತ ಕಾಯಕದ ಘನತೆಯನ್ನು ಅರಿತು ಮನಃ ಪರಿವರ್ತನೆ ಹೊಂದಿದರು.

ದೇವನೂರಿನ ಪಟೇಲ್ ಸುಬ್ಬೇಗೌಡರ ಪತ್ನಿ ಶಂಕರಮ್ಮನವರಿಗೆ ಹಿಡಿದ ಬ್ರಹ್ಮಪಿಶಾಚವನ್ನು ಬಂಧಮುಕ್ತಗೊಳಿಸಿದ ಗುರುಮಲ್ಲೇಶ್ವರರು ಭಕ್ತರ ಪ್ರಾರ್ಥನೆಯೆಂಬಂತೆ ಅಲ್ಲಿಯೇ ನೆಲಸಿದರು. ಅಲ್ಲಿಯೇ ಒಂದು ಮನೆಯಲ್ಲಿ ವಾಸ್ತವ್ಯ ಹೂಡಿ, ಕಂಥೆ ಭಿಕ್ಷದ ಕಾಯಕ ಮಾಡಿ ಪ್ರಸಾದವನ್ನು ಅಲ್ಲಿ ಸೇರುತ್ತಿದ್ದ ಕುಂಟರು ಕುರುಡರು, ಅಶಕ್ತರು, ನಿರ್ಗತಿಕರಿಗೆ ದಾಸೋಹ ಮಾಡತೊಡಗಿದರು. ಹೀಗೆ ಕಂಥೆ ಭಿಕ್ಷ ಕಾಯಕದ ಶ್ರೀ ಗುರುಮಲ್ಲೇಶ್ವರರ ದಾಸೋಹ ಮಠ ಪ್ರಸಿದ್ಧಿ ಪಡೆಯಿತು. ದೇವನೂರಿಗೆ ಅವರ ಜೊತೆ ಬಂದಿದ್ದ ಶ್ರೀ ಮುಪ್ಪಿನಸ್ವಾಮಿಗಳು ಲಿಂಗೈಕ್ಯರಾದ ಮೇಲೆ ಅವರ ಗದ್ದುಗೆ ನಿರ್ಮಿಸಿ ಸಾಧಾರಣ ತೆಂಗಿನಗರಿಯ ಮನೆಯನ್ನು ನಿರ್ಮಿಸಿ, ಶರಣನೊಡನೆ ಅಲ್ಲಿ ವಾಸಮಾಡತೊಡಗಿದರು. ಕಾಯಕ ಪ್ರಸಾದ ಊರ ಒಳಗಿನ ಮಠದಲ್ಲಿ ನಡೆಯುತ್ತಿದ್ದು ಕ್ರಮೇಣ ಅದು 'ಹಳೇಮಠ' ವಾಯಿತು. ಕಾಯಕ-ದಾಸೋಹಗಳು ಹೊಸಮಠದಲ್ಲಿ ಮುಂದುವರಿದವು. ಇದು ಕ್ರಿ.ಶ. ೧೮೫೮ರಲ್ಲಿ ಸ್ಥಾಪಿತವಾಗಿರಬಹುದೆಂದು ಊಹಿಸಲಾಗಿದೆ. ನೂರು ವರ್ಷಗಳ ಹಿಂದೆ

ಹಚ್ಚಿದ ಒಲೆ ಬೆಂಕಿ ಆರಿಸದೆ ಇಂದಿಗೂ ಮುಂದುವರೆದು ಕೊಂಡು ನಿತ್ಯನಿತ್ಯ ನೂರಾರು ಭಕ್ತರ ಪ್ರಸಾದ ವಿನಿಯೋಗ ನಿರಾತಂಕವಾಗಿ ನಡೆದು 'ಕಲಿಯುಗದ ಅಚ್ಚರಿ' ಎನಿಸಿದೆ.

ಹತ್ತೊಂಬತ್ತನೆಯ ಶತಮಾನದ ವೇಳೆಗೆ ವೀರಶೈವ ಧರ್ಮದ ಆಚರಣೆಗಳಲ್ಲಿ ಅಸ್ತವಸ್ತ್ಯವಾಗಿದ್ದವು. ಧರ್ಮದ ಪುನರುಜ್ಜೀವನದ ಮೂಲಕ ಬಸವಾದಿ ಪ್ರಮಥರ ಸತ್ ಸಂಪ್ರದಾಯ ವಿಭೂತಿ-ಪಾದೋದಕ-ಪ್ರಸಾದ-ರುದ್ರಾಕ್ಷಿ ಧಾರಣೆ ಜೊತೆಗೆ ಬಸವಣ್ಣನವರ ಸಪ್ತಶೀಲ ಸೂತ್ರವನ್ನು, ಜನಮನದಲ್ಲಿ ಬಿತ್ತಿ ನೈತಿಕ-ಧಾರ್ಮಿಕ ಪ್ರಜ್ಞೆಯನ್ನು ಎಚ್ಚರ ಗೊಳಿಸಿ ಮಾರ್ಗದರ್ಶಿಸಿದರು. ಸದ್ದುಗದ್ದಲವಿಲ್ಲದೆ ಶರಣ ಧರ್ಮವನ್ನು ಗ್ರಾಮಾಂತರ ಪ್ರದೇಶಗಳಿಗೆ ಕಾಲ್ನಡಿಗೆಯಲ್ಲಿ, ಎತ್ತಿನಗಾಡಿಯಲ್ಲಿ ತಲುಪಿ ಸಲ್ಲಿಸಿರುವ ಸೇವೆ ಅವಿಸ್ಮರಣೀಯ. ಸಮಾಜಕ್ಕೆ ಅರ್ಪಿಸಿರುವ ದಾಸೋಹತತ್ವ, ಕಾಯಕನಿಷ್ಠೆ, ಸಮಾನತೆ, ಸರ್ವೋದಯ ತತ್ವಗಳು ಅಸಂಖ್ಯಾತ ಜನರ ಮನಸ್ಸನ್ನು ಆವರಿಸಿವೆ. ೧೮೬೭ರ ಜೂನ್ ೨೯ರಂದು ಬಯಲಾದ ಶ್ರೀ ಗುರುಮಲ್ಲೇಶ್ವರರು ಚಿರಂತನ ಪ್ರಭೆಯಾಗಿ ಬೆಳಗುತ್ತಿದ್ದಾರೆ. ಪೂಜೆ, ದಾಸೋಹ, ಸಭೆ ಸಮಾರಂಭಗಳ ಸಂದರ್ಭದಲ್ಲಿ 'ಜೈ ನಮಃ ಪಾರ್ವತೇ ಹರಹರಾ ಮಹಾದೇವ್ ಶ್ರೀ ಗುರುಮಲ್ಲೇಶ ಮಹಾಪ್ರಭು ಜೈಪರಾಕ್' ಎಂಬ ಸ್ತುತಿ ಘೋಷಣೆಯಿಂದ ಭಕ್ತಿ ಸ್ಮರಣೆಯ ನಂತರವೇ ಜನರು ಇಂದಿಗೂ ಕಾರ್ಯಗಳನ್ನು ಮುಂದುವರೆಸುವುದು. ಜನಮನದಲ್ಲಿ ರೂಢಿಗತ ಆಚರಣೆಯಾಗಿರುವುದು ಶ್ರೀಗುರುಮಲ್ಲೇಶ್ವರರು ಭಕ್ತರ ಹೃದಯದಲ್ಲಿ ಜೀವಂತವಾಗಿರುವ ಪ್ರತೀಕವೇ ಆಗಿದೆ.

ದೇವನೂರು ಇಂದು ಪ್ರಸಿದ್ಧ ಶರಣರ ಯಾತ್ರಾಸ್ಥಳವಾಗಿದೆ. ಅವಿಮುಕ್ತ ಕ್ಷೇತ್ರವಾಗಿದೆ. ಶ್ರೀಮಠದ ದರ್ಶನದ ಜೊತೆಗೆ ಶ್ರೀ ಗುರುಮಲ್ಲೇಶ್ವರರ ಗದ್ದುಗೆ, ಶ್ರೀ ತೋಂಟದಾರ್ಯರ ಗದ್ದುಗೆ, ಶ್ರೀ ಮುಪ್ಪಿನ ಸ್ವಾಮಿಗಳ ಗದ್ದುಗೆ, ಶ್ರೀ ವಿರಕ್ತ ಸ್ವಾಮಿಗಳು, ಶ್ರೀ ಶರಣಬಸಪ್ಪ ತಾತಾ, ಶ್ರೀಮೌನಿ ಸ್ವಾಮಿ, ಶ್ರೀ ಚೆನ್ನಬಸಪ್ಪಸ್ವಾಮಿ, ಶ್ರೀ ಶೈಲದ ಶಿವಾನಂದ ಮುಪ್ಪಿನಸ್ವಾಮಿ ಶ್ರೀ ಭಿಕ್ಷದ ರಾಚಪ್ಪಸ್ವಾಮಿಗಳ ಗದ್ದುಗೆಗಳು, ಶ್ರೀಗುರು ಭಜನಾ ಮಂದಿರ, ಶ್ರೀ ಶಿವಪ್ಪಸ್ವಾಮಿಗಳು, ಶ್ರೀ ಬಸವಣ್ಣಸ್ವಾಮಿ, ಶ್ರೀ ದೊಂದಪ್ಪಸ್ವಾಮಿ, ಶ್ರೀ ಕಿತ್ತೂರುಂಡಿ ಶಿವನಂಜಪ್ಪಸ್ವಾಮಿ, ಶ್ರೀ ನೀಲಸೋಗೆ ಸ್ವಾಮಿ, ಶ್ರೀ ಶಿವಬಸವಸ್ವಾಮಿಗಳವರ ಗದ್ದುಗೆಗಳಿವೆ. ಇವರೆಲ್ಲರೂ ಶಿವಾನುಭವಿಗಳು. ಶ್ರೀಮಠದ ಶ್ರೇಯೋಭಿವೃದ್ಧಿಗೆ ಜೀವನವನ್ನು ಸವೆಸಿದ ಶರಣರು. ಶ್ರೀಮಠದ ಪ್ರಸಾದ ನಿಲಯ, ಅಡುಗೆಮನೆ, ನೋಡಲರ್ಹವಾದ ಪವಿತ್ರತಾಣಗಳೂ ಆಗಿವೆ. ಆಳೆತ್ತರದ ಕಡಾಯಿಗಳು, ಕೊಪ್ಪರಿಗೆಗಳು, ನಿತ್ಯವೂ ತಯಾರಾಗುವ ಅನ್ನಸಾರು, ಮುದ್ದೆ, ಪಾಯಸ, ಕಡಲೇಹುಳಿ-ಪ್ರಮುಖ ಪ್ರಸಾದಗಳಾಗಿ ಭಕ್ತರ ಪಾಲಿಗೆ ದಿವ್ಯ ಔಷಧಗಳಾಗಿವೆ.

ಶ್ರೀ ಗುರುಮಲ್ಲೇಶ್ವರ ಮಠವು ಶಿಕ್ಷಣಾಭಿವೃದ್ಧಿಯಲ್ಲಿ ಸೇವೆ ಸಲ್ಲಿಸುತ್ತಿದೆ. ಶ್ರೀ ಗುರುಮಲ್ಲೇಶ್ವರ ಪಾಲಿಟೆಕ್ನಿಕ್ ಕಾಲೇಜು, ಸಂಸ್ಕೃತ ಮಹಾಪಾಠಶಾಲೆ, ಶ್ರೀ ಗುರುಮಲ್ಲೇಶ್ವರ ಬಾಲಿಕಾ ಪ್ರೌಢಶಾಲೆ. ಶ್ರೀ ಗುರುಮಲ್ಲೇಶ್ವರ ಉಚಿತ ವಿದ್ಯಾರ್ಥಿ ನಿಲಯಗಳು ಗ್ರಾಮೀಣ ಪ್ರದೇಶದ ಮಕ್ಕಳ ಶಿಕ್ಷಣಕ್ಕೆ ಅವಕಾಶ ನೀಡಿವೆ. ಜ್ಞಾನ ದಾಸೋಹ ಕೈಂಕರ್ಯ ನಡೆಸುತ್ತಾ ಉತ್ತಮ ಸೇವೆ ಸಲ್ಲಿಸುತ್ತಿದೆ.

ದೇವನೂರಿನಲ್ಲಿ ಶ್ರೀ ಬಸವೇಶ್ವರ ದಂಡಿ ಮಾರಮ್ಮ, ಗಣಪತಿ, ಸೋಮೇಶ್ವರ ನಾರಾಯಣಸ್ವಾಮಿ, ಮಂಟೇಸ್ವಾಮಿ, ವೀರಭದ್ರೇಶ್ವರಸ್ವಾಮಿ, ಸಿದ್ಧರಾಮಪ್ಪ ದೇವ ಶ್ರೀಪುರದ ಬಸಪ್ಪ, ಮಲ್ಲಿಕಾರ್ಜುನ ದೇವಾಲಯಗಳು ಇವೆ. ಇವಲ್ಲದೆ ರಾಕಸಮ್ಮ, ಶನೇಶ್ವರ, ನಡಕೇರಿ ಮಾರಮ್ಮ, ಮಾಣಿಯಮ್ಮ, ಗದ್ದಮಾರಮ್ಮ, ಕ್ಯಾತೇದೇವರ ಗುಡಿಗಳೂ ಇವೆ. ವಿವಿಧ ಕೋಮುಗಳಿಗೆ ಸೇರಿದ ಜನರು ಸಾಮರಸ್ಯದಿಂದ ಬಾಳುತ್ತಿದ್ದಾರೆ.

ದೇವನೂರು ಶ್ರೀ ಗುರುಮಲ್ಲೇಶ್ವರ ಜೀವನವೇ ಪವಾಡಮಯವಾಗಿ ಅಮೂಲ್ಯ ಆಶ್ಚರ್ಯಕರ ಸಂಗತಿಗಳಲ್ಲಿ ಅವರ ಆತ್ಮಶಕ್ತಿ, ಮಹಿಮೆಗಳು ಅಡಕವಾಗಿವೆ. ಬಸವಣ್ಣನವರ ತತ್ವಗಳನ್ನು ಆಚರಣೆಗೆ ತಂದು ಹತ್ತೊಂಬತ್ತನೆಯ ಶತಮಾನದಲ್ಲಿ ದೇವನೂರು ಭಾಗದಲ್ಲಿ ಅಲ್ಲದೆ ನೂರಾರು ಗ್ರಾಮಗಳಲ್ಲಿ ಸಂಚರಿಸಿ, ಮಠಗಳನ್ನು ಸ್ಥಾಪಿಸಿದರು. ವೀರಶೈವ ಧರ್ಮದ ಪುನರುಜ್ಜೀವನಕ್ಕೆ ಕಾರಣಕರ್ತರಾದ ಶ್ರೀ ಗುರುಮಲ್ಲೇಶ್ವರರು ಇಂದಿಗೂ ಅಭಿನವ ಬಸವೇಶ್ವರರೇ ಎಂದು ಭಾವಿಸಿ, ಆರಾಧಿಸುವ ಭಕ್ತಕೋಟಿಯ ಜನಮಾನಸದಲ್ಲಿ ಚಿರಂತನ ಸ್ಫೂರ್ತಿದಾತ ಶಿವಶಕ್ತಿ ಸ್ವರೂಪರಾಗಿದ್ದಾರೆ. ಶ್ರೀ ಗುರುಮಲ್ಲೇಶ್ವರರು ಹಾಗೂ ಅವರ ಅನುಯಾಯಿ ಶರಣ ಪರಂಪರೆಯಿಂದ ದೇವನೂರು ನಿತ್ಯನೂತನವಾಗಿದೆ ಪ್ರಸಿದ್ಧ ಶರಣ ಕ್ಷೇತ್ರವಾಗಿ ಕಂಗೊಳಿಸುತ್ತಿದೆ.

*





## ಸಸ್ಯ ಸಂಜೀವಿನಿ-ಅರಿಶಿಣ

-ಶೈಲೇಶ್,
ಕರ್ನಾಟಕ ಆಯುರ್ವೇದ ಮೆಡಿಕಲ್ ಕಾಲೇಜು,
ಮಂಗಳೂರು.

ಅರಿಶಿಣ ವೇದ ಕಾಲದಿಂದಲೂ ಹೆಸರುವಾಸಿಯಾದ ದ್ರವ್ಯಗಳಲ್ಲೊಂದಾಗಿದೆ. ನಮ್ಮ ದೇಶದಲ್ಲಿ ಅರಿಶಿಣವಿಲ್ಲದೆ ಯಾವ ಶುಭಕಾರ್ಯಗಳೂ ಜರುಗುವುದಿಲ್ಲ. ಅಡುಗೆ ಮನೆಯಿಂದ ಹಿಡಿದು ಮದುವೆ ಮಂಟಪದವರೆಗೂ ಅರಿಶಿಣವು ಉಪಯೋಗಿ. ಹಿಂದಿನ ಕಾಲದಲ್ಲಿ ಭಾರತದ ಹೆಣ್ಣು ಮಕ್ಕಳು ಅರಿಶಿಣವನ್ನು ಸೌಭಾಗ್ಯದ, ಮುತ್ತೈದತನದ ಗುರುತಾಗಿ ಮೈಗೆ ಹಚ್ಚಿಕೊಳ್ಳುತ್ತಿದ್ದರು. ಆ ವಾಡಿಕೆಯು ಇರುವವರೆಗೆ ಹೆಂಗಳೆಯರ ಮೈಮೊಗಗಳು ಚಿನ್ನದಂತೆ ಬೆಳಗುತ್ತಿದ್ದವು. ಚರ್ಮರೋಗಗಳಿಲ್ಲದೆ ಹೊಳೆಯುತ್ತಿದ್ದವು.

ನಾವು ದಿನನಿತ್ಯ ತಿನ್ನುವ ಆಹಾರವು ಅನೇಕ ರಾಸಾಯನಿಕ ವಸ್ತುಗಳಿಂದ ಕೂಡಿದೆ. ಅನೇಕ ರಾಸಾಯನಿಕಗಳು ದೇಹದ ಮೇಲೆ ಅನೇಕ ತರಹದ ದುಷ್ಪರಿಣಾಮಗಳನ್ನು ಬೀರುತ್ತವೆ. ಆದರೆ, ಅರಿಶಿಣವನ್ನು ಅಡುಗೆಗೆ ಬಳಸುವುದರಿಂದ ಇಂತಹ ದುಷ್ಪರಿಣಾಮಗಳಿಂದ ದೇಹವನ್ನು ರಕ್ಷಿಸಬಹುದು. ಯಾಕೆಂದರೆ-ಅರಿಶಿಣವು ಉತ್ತಮ ವಿಷನಾಶಕವಾಗಿದೆ.

ಯುವತಿಯರು ತಮ್ಮ ಸೌಂದರ್ಯವನ್ನು ರಕ್ಷಿಸಿಕೊಳ್ಳಲು ವಿವಿಧ ಆಧುನಿಕ ಸೌಂದರ್ಯವರ್ಧಕ ಕ್ರೀಂಗಳನ್ನು ಬಳಸುತ್ತಾರೆ. ಅವುಗಳಿಂದ ಪ್ರಯೋಜನದ ಜತೆಗೆ ದುಷ್ಪರಿಣಾಮಗಳು ಉಂಟಾಗುತ್ತವೆ. ಎಲ್ಲರಿಗೂ ಸುಲಭದಲ್ಲಿ ದೊರಕುವ ಅರಿಶಿಣವು ಹೆಚ್ಚು ಸುರಕ್ಷಿತ ಮತ್ತು ಪರಿಣಾಮಕಾರಿ ಸೌಂದರ್ಯ ಸಾಧನವಾಗಿದೆ.

ಕನ್ನಡದಲ್ಲಿ 'ಅರಿಶಿಣ' ಎಂದು ಕರೆಯುವ ಈ ದ್ರವ್ಯವನ್ನು ತುಳುವಿನಲ್ಲಿ 'ಮಂಜೊಲ್' ಎಂದೂ, ಇಂಗ್ಲೀಷ್‌ನಲ್ಲಿ 'ಟರ್ಮರಿಕ್' ಎಂದೂ, ಸಂಸ್ಕೃತದಲ್ಲಿ 'ಹರಿದ್ರಾ' ಎಂದೂ ಕರೆಯುತ್ತಾರೆ. ಹರಿದ್ರಾ, ಕಾಂಚನೀ, ಕಿಮಿಘ್ನಾ, ಯೋಷಿತಪ್ರಿಯಾ, ಗೌರೀ, ವರವರ್ಣಿನಿ, ಪೀತಾ, ಹರಿತಾ, ಜಯಂತೀ, ಹಟ್ಟವಿಲಾಸಿನೀ, ನಿಶಾ ಹೀಗೆ ಹಲವು ನಾಮಗಳಿಂದ ಕೂಡಿದ ಈ ದ್ರವ್ಯವು Zingiberaceae (ಝಿಂಗಿ ಬೆರಾಸಿಯಸ್) ಕುಟುಂಬಕ್ಕೆ ಸೇರಿದೆ. ಸಸ್ಯಶಾಸ್ತ್ರದಲ್ಲಿ ಇದನ್ನು Curcumalonga (ಕರ್ಕ್ಯುಮಲೊಂಗ) ಎಂದು ಕರೆಯುತ್ತಾರೆ. ಹರಿದ್ರಾದಲ್ಲಿ ನಾಲ್ಕು ವಿಧಗಳಿವೆ. ಅವು ಹರಿದ್ರಾ ದಾರುಹರಿದ್ರಾ (Berberies aristata) ವನಹರಿದ್ರಾ (curcuma aromalica ) ಮತ್ತು ಆಮಗಂಧಿ ಹರಿದ್ರಾ (Curcuma amada)

ಅರಿಶಿಣ ಒಂದು ಬಹುವಾರ್ಷಿಕ ಸಸ್ಯ. ಬಹು ವರ್ಷಾಯುವಾದ ಅರಿಶಿಣದ ಗಿಡ ಸುಮಾರು ಒಂದರಿಂದ ಮೂರು ಮೀಟರ್ ಎತ್ತರಕ್ಕೆ ಬೆಳೆಯುತ್ತದೆ. ಎಲೆಯು ಒಂದರಿಂದ ಎರಡು ಮೀಟರ್‌ನಷ್ಟು ಉದ್ದವಾಗಿ ಅರಿಶಿಣದ ವಾಸನೆಯನ್ನು ಬೀರುತ್ತದೆ. ಭೂ ಅಂತರ್ಗತ ಕಾಂಡವನ್ನು ಹೊಂದಿದ್ದ ಈ ಸಸ್ಯವು ಶುಂಠಿ ಸಸ್ಯವನ್ನು ಹೋಲುತ್ತದೆ. ಈ ಸಸ್ಯವು ಹಳದಿ ಬಣ್ಣದ ಹೂಗಳನ್ನು ಬಿಡುತ್ತದೆ.

ಅರಿಶಿಣವನ್ನು ಸಾಮಾನ್ಯವಾಗಿ ಜೂನ್‌ನಲ್ಲಿ ನೆಟ್ಟು, ಡಿಸೆಂಬರ್-ಜನವರಿಯಲ್ಲಿ ಕಟಾವು ಮಾಡುತ್ತಾರೆ. ಸಾಮಾನ್ಯವಾಗಿ ಎಲ್ಲ ಕಡೆಗಳಲ್ಲಿ ಬೆಳೆಸುವ ಅರಿಶಿಣವನ್ನು ರಾಜಸ್ಥಾನ್, ಮಧ್ಯಪ್ರದೇಶ, ಮಹಾರಾಷ್ಟ್ರ, ಗೋವಾ, ಕರ್ನಾಟಕ, ಕೇರಳ, ತಮಿಳುನಾಡು, ಆಂಧ್ರಪ್ರದೇಶ ಮುಂತಾದ ರಾಜ್ಯಗಳಲ್ಲಿ ಕಾಣಬಹುದು.

ಅರಿಶಿಣವು ರುಚಿಯಲ್ಲಿ ಕಹಿಯಾಗಿದ್ದು, ರೂಕ್ಷ, ಉಷ್ಣ ಗುಣಗಳಿಂದ ಕೂಡಿದೆ. ವಿಷ ಮತ್ತು ಕುಷ್ಠ ರೋಗವನ್ನು ಪರಿಹರಿಸುತ್ತದೆ. ತುರಿಕೆ, ಪ್ರಮೇಹ ಗಾಯಗಳನ್ನು ಗುಣ

ಪಡಿಸುತ್ತದೆ. ಚರ್ಮದ ಸೌಂದರ್ಯವನ್ನು ಹೆಚ್ಚಿಸುತ್ತದೆ. ರಕ್ತಶೋಧಕವೂ, ಕ್ರಿಮಿಹರವೂ, ಪೀನಸ ಮತ್ತು ಅರುಚಿ ರೋಗನಾಶಕವೂ ಆಗಿದೆ. ಅರಿಶಿಣ ಮತ್ತು ಶ್ರೀಗಂಧವನ್ನು ತೇಯ್ದು ಪ್ರತಿದಿನ ಮುಖಕ್ಕೆ ಹಚ್ಚಿಕೊಂಡರೆ ಮುಖವು ಕಾಂತಿಯುತವಾಗುತ್ತದೆ. ಮೊಡವೆ ಮತ್ತು ಕಲೆಗಳು ಕೂಡ ಇದರಿಂದ ನಿವಾರಣೆಯಾಗುತ್ತದೆ. ಹುರಿದ ಅರಿಶಿಣ ಚೂರ್ಣವನ್ನು ಜೇನಿನೊಂದಿಗೆ ತೆಗೆದುಕೊಳ್ಳುವುದರಿಂದ ಅಸ್ತಮಾ, ಕೆಮ್ಮು ರೋಗಕ್ಕೆ ಒಳ್ಳೆಯದು. ಅರಿಶಿಣ ಚೂರ್ಣವನ್ನು ಜೇನಿನೊಂದಿಗೆ ಬೆರೆಸಿ, ನೆಲ್ಲಿಕಾಯಿಯ ರಸದೊಂದಿಗೆ ಸೇವಿಸುವುದರಿಂದ ಪ್ರಮೇಹ ರೋಗವು ಕಡಿಮೆಯಾಗುತ್ತದೆ. ಶರೀರದ ಯಾವುದೇ ಭಾಗಕ್ಕೆ ಪೆಟ್ಟು ಬಿದ್ದು ಊದಿಕೊಂಡಿದ್ದರೆ ಅರಿಶಿಣ ಪುಡಿ, ಉಪ್ಪು ಸೇರಿಸಿ ನಿಂಬೆರಸದಲ್ಲಿ ಅರೆದು ಲೇಪ ತಯಾರಿಸಿಕೊಂಡು ಅದನ್ನು ಬಿಸಿ ಮಾಡಿ ಪೆಟ್ಟು ಬಿದ್ದಿರುವ ಜಾಗಕ್ಕೆ ಹಚ್ಚಿದರೆ ಊತ ಕಡಿಮೆಯಾಗಿ ನೋವೂ ಕಡಿಮೆಯಾಗುತ್ತದೆ.

ಶೀತ, ನೆಗಡಿ ಇರುವಾಗ ಒಂದು ಲೋಟ ಬಿಸಿ ಹಾಲಿಗೆ ಒಂದು ಚಮಚ ಅರಿಶಿನ ಪುಡಿ ಹಾಗೂ ಬೆಲ್ಲ ಸೇರಿಸಿ ದಿನಕ್ಕೆ ಎರಡು ಬಾರಿ ಕುಡಿಸಬೇಕು. ಅರಿಶಿಣ, ಅಮೃತಬಳ್ಳಿ, ಜೇನು ಈ ಮೂರನ್ನು ಸೇರಿಸಿ ತಯಾರಿಸಿದ ಕಷಾಯವನ್ನು ಸೇವಿಸುವುದರಿಂದ ವಾತರಕ್ತ ರೋಗವು ನಾಶವಾಗುತ್ತದೆ. ಅರಿಶಿಣವನ್ನು ತ್ರಿಫಲ ಚೂರ್ಣದೊಂದಿಗೆ ಬೆರೆಸಿ ತುಪ್ಪ ಮತ್ತು ಜೇನನ್ನು ಸೇರಿಸಿ ಕುಡಿಯುವುದರಿಂದ ರಕ್ತಹೀನತೆಯಿಂದ ಬಳಲುತ್ತಿರುವವರಿಗೆ ಒಳ್ಳೆಯದು. ಹರಿದ್ರಾಚೂರ್ಣವನ್ನು ನೀರಿನಲ್ಲಿ ಬೆರೆಸಿ ಅದಕ್ಕೆ ಸ್ವಲ್ಪ ಪ್ರಮಾಣದ ಹುಣಸೆ ಎಲೆಯ ರಸವನ್ನು ಸೇರಿಸಿ ಕುಡಿಯುವುದರಿಂದ ಸಿಡುಬು ರೋಗಕ್ಕೆ ಒಳ್ಳೆಯದು. ಸಂಧಿವಾತ ನಿವಾರಣೆಗಾಗಿ ಅರಿಶಿಣ ಚೂರ್ಣ ಮತ್ತು ಶುಂಠಿಯನ್ನು ಸಮಾನ ಭಾಗದಲ್ಲಿ ತೆಗೆದುಕೊಂಡು ಹಾಲಿನ ಜತೆಗೆ ಸೇವಿಸಬೇಕು. ಅರಿಶಿಣ ಬೇರನ್ನು ಜೇನುತುಪ್ಪದಲ್ಲಿ ತೇದು ಕೊಟ್ಟರೆ ಮಕ್ಕಳು ಹಾಸಿಗೆಯಲ್ಲಿ ಮೂತ್ರ ವಿಸರ್ಜನೆ ಮಾಡುವುದನ್ನು ತಡೆಗಟ್ಟಬಹುದು. ಹೃದಯ ನೋವು ನಿವಾರಣೆಗಾಗಿ ಅರ್ಧ ಚಮಚ ಅರಿಶಿಣ ಪುಡಿಗೆ ಒಂದು ಚಮಚ ಕಲ್ಲು ಸಕ್ಕರೆ ಸೇರಿಸಿ ನೀರು ಕುಡಿಯದೇ ಹಾಗೆಯೇ ನುಂಗಬೇಕು. ಅರಿಶಿಣ ಬೇರನ್ನು ಸುಟ್ಟು ಅದರ ಚೂರ್ಣವನ್ನು ಲೋಳೆರಸದಲ್ಲಿ ಬೆರೆಸಿ ಕುಡಿಯುವುದರಿಂದ ಮೂಲವ್ಯಾಧಿ ನಿವಾರಣೆಯಾಗುತ್ತದೆ. ಅರಿಶಿಣ ಬೇರು, ಮೆಣಸು, ಅತಿಮಧುರ, ಅಮೃತಬಳ್ಳಿ ಇವುಗಳನ್ನು ಸಮತೂಕದಲ್ಲಿ ಸೇರಿಸಿ ಮಾಡಿದ ಪುಡಿಯಿಂದ ಕಷಾಯವನ್ನು ಕುದಿಸಿ ಕುಡಿದರೆ, ಹಳೆಯ ನೆಗಡಿ, ಜ್ವರ, ಕೆಮ್ಮು ತಲೆನೋವುಗಳು ಗುಣವಾಗುವುದು. ಬೇರನ್ನು ಪುಡಿ ಮಾಡಿ ನೀರಿನಲ್ಲಿ ಕುದಿಸಿ, ಆ ನೀರಿನಿಂದ ದಿನದಲ್ಲಿ ಕೆಲವು ಸಲ ಕಣ್ಣನ್ನು ಒರೆಸಿದರೆ ಕೆಂಗಣ್ಣು ರೋಗವು ಗುಣವಾಗುವುದು. ಹೀಗೆ ಹಳದಿ ಬಣ್ಣದಿಂದ ಕಂಗೊಳಿಸುವ ಅರಿಶಿಣವು ಈ ಎಲ್ಲ ಔಷಧಿ ಗುಣಗಳಿಂದ ಕೂಡಿದ್ದು, ಆರೋಗ್ಯ ಕಾಪಾಡುವುದರಿಂದ ಆಯುರ್ವೇದದಲ್ಲಿ ಒಂದು ಅಗ್ರ ದ್ರವ್ಯವೆನಿಸಿದೆ.

ಕೃಪೆ : ನಿರಂತರ ಪ್ರಗತಿ

## ಒಂದೆಲಗ

ತಂಪಿನ ನೆಲದ ಮೇಲೆ ಹರಡಿ ಹಬ್ಬುವ ಒಂದೆಲಗ ಕಿವಿಯಾಕಾರದ ಪುಟ್ಟ ಪುಟ್ಟ ಎಲೆಗಳನ್ನು ಹೊಂದಿರುತ್ತವೆ. ಮಲೆನಾಡಿನಲ್ಲಿ ನೀರು ನಿಲ್ಲುವ, ತೇವಾಂಶ ಜಾಸ್ತಿಯಿರುವ ಕಡೆ ಸಮೃದ್ಧವಾಗಿ ಹಬ್ಬುವ ಒಂದೆಲಗ ಸಸ್ಯವನ್ನು ಕಾಣಬಹುದು. ಬೇರಿರುವ ಕಾಂಡಗಳನ್ನು ಕುಂಡಗಳಲ್ಲಿಯೋ ಮನೆಯ ಹೂತೋಟದಲ್ಲಿ ತೇವಾಂಶವಿರುವ ಸ್ಥಳದಲ್ಲೋ ನೆಟ್ಟು ಎರಡು ಮೂರು ತಿಂಗಳ ನಂತರ ಬಳಸಬಹುದು.

ನೋಡಲು ಅತ್ಯಂತ ಪುಟ್ಟ ಸಸ್ಯವಾದರೂ, ಬೆಟ್ಟದಷ್ಟು ಗುಣಗಳಿರುವ ಒಂದೆಲಗವನ್ನು ಆಯುರ್ವೇದದಲ್ಲಿ ಬ್ರಾಹ್ಮೀ ಮತ್ತು ಪರ್ಣಿ ಎಂಬ ಹೆಸರಿನಿಂದ ಉಚ್ಚರಿಸುತ್ತಾರೆ. ನೆನಪಿನ ಶಕ್ತಿಯನ್ನು ಹೆಚ್ಚಿಸುವುದರೊಂದಿಗೆ, ಹೃದಯರೋಗ, ಚರ್ಮರೋಗ, ಊತ, ಅರುಚಿ, ಜ್ವರ, ಕೆಮ್ಮು, ದಮ್ಮು, ರಕ್ತಹೀನತೆ, ರಕ್ತವಿಚಾರ ಮುಂತಾದ ತೊಂದರೆಗಳಿಗೆ ಒಂದೆಲಗ ದಿವ್ಯೌಷಧ.

ಬಿಸಿನೀರಿನಲ್ಲಿ ತೊಳೆದ ಒಂದೆಲಗದ ಎಲೆಗಳನ್ನು ಚೆನ್ನಾಗಿ ಜಜ್ಜಿ ರಸ ತೆಗೆಯಬೇಕು. ಕಾಲು ಲೋಟ ಕಾಯಿಸಿ ಆರಿಸಿದ ಹಾಲಿಗೆ ಒಂದರಿಂದ ಎರಡು ಚಮಚ ಒಂದೆಲಗ ರಸ ಮತ್ತು ಅರ್ಧ ಚಮಚ ಜೇನುತುಪ್ಪ ಸೇರಿಸಿ, ದಿನಕ್ಕೆ ಎರಡು ಬಾರಿ ಆಹಾರ ಸೇವಿಸುವ ಮೊದಲು ಸೇವಿಸಬೇಕು. ಇದರಿಂದ ಜ್ಞಾಪಕಶಕ್ತಿ ವೃದ್ಧಿಸುವುದರೊಂದಿಗೆ ಬುದ್ಧಿಶಕ್ತಿ ಹೆಚ್ಚುತ್ತದೆ ಮತ್ತು ಸ್ವರ ಸ್ಫುಟವಾಗುತ್ತದೆ.





# ನಿಸರ್ಗೋಪಚಾರದಲ್ಲಿ ಸ್ನಾನದ ಸ್ಥಾನ

–ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು –೫೭೨ ೧೦೨.

ಕಣ್ಣುಗಳ ಕಣ್ಣೀರು :

*ಕಣ್ಣುಗಳು ಹಾಕುತಿಹವು ಕಣ್ಣೀರು*
*ಅದನು ತಪ್ಪಿಸಲು ಹಾಕಯ್ಯ ತಣ್ಣೀರು !*

ಬೆಳಿಗ್ಗೆ ಮುಖ ತೊಳೆಯುವಾಗ ಎರಡು ಕಣ್ಣುಗಳಿಗೂ ತಣ್ಣೀರನ್ನು ಕೈನ ಬೊಗಸೆಯಿಂದ ಎರಚಿಕೊಳ್ಳುವುದು. ಇದರಿಂದ ಅಲ್ಲಿನ ರಕ್ತಚಲನೆ ಹೆಚ್ಚಾಗುವುದಲ್ಲದೆ ಕಣ್ಣುಗಳನ್ನು ತಂಪಾಗಿಡುವುದು. ಇದರ ಜೊತೆಗೆ ಎರಡು ಬಾರಿ ಐ–ಕಪ್‌ನಿಂದ ಕಣ್ಣುಗಳನ್ನು ತೊಳೆಯುವುದು ಉತ್ತಮ. ಐ–ಕಪ್‌ಗಳು ಮಾರುಕಟ್ಟೆಯಲ್ಲಿ ಸಿಗುತ್ತವೆ. ಇದಲ್ಲದೆ ತಣ್ಣೀರಿನಲ್ಲಿ ಬಾತ್ ಟಬ್‌ನಲ್ಲಿ ಸ್ನಾನ ಮಾಡುವಾಗ ಕಣ್ಣು ಗಳನ್ನು ನೀರಿನಲ್ಲಿ ಬಿಟ್ಟು ಮಿಟುಕಿಸುತ್ತಿರಬೇಕು. ಇದಿಷ್ಟಲ್ಲದೆ ಸೌತೆಕಾಯಿಯನ್ನು ಗುಂಡಗೆ ಬಿಲ್ಲೆ ಮಾಡಿ ಎರಡೂ ಕಣ್ಣುಗಳ ಮೇಲಿಟ್ಟು ಕೊಂಚಕಾಲ ಅಂದರೆ ೧೦ರಿಂದ ೧೫ ನಿಮಿಷ ಮಲಗಬೇಕು. ಇದಕ್ಕಾಗಿ ಆಲೂಗೆಡ್ಡೆಯ ಬಿಲ್ಲೆ, ಕೋಸಿನ ಎಲೆ, ನಂದಿಬಟ್ಟಲು ಹೂ/ಎಲೆ ಮುಂತಾದುವುಗಳನ್ನೂ ಬಳಸಬಹುದು.

ವಿ.ಸೂ. : ಕಣ್ಣುಗಳಿಗೆ ನೀರು ಹಾಕಿದರೆ ಅವು ಒಣಗುವುವು ಎಂಬ ಹೇಳಿಕೆ ಒಂದುಂಟು. ಹಾಗಾದರೆ, ನೀರು ಕುಡಿದರೆ ಶರೀರ ಒಣಗುತ್ತದೆಯೇ?!

**ಕಿವಿಗಳಿಗೂ ಬೇಕು ತಣ್ಣೀರು :** ನಾವು ಶರೀರದ ಎಲ್ಲಾ ಭಾಗ ಗಳತ್ತ ಗಮನ ಹರಿಸುತ್ತೇವೆ. ಆದರೆ ಕಿವಿಯ ಬಗ್ಗೆ ಚಿಂತಿಸು ವುದೇ ಇಲ್ಲ. ಅದಕ್ಕೂ ನಿತ್ಯವೂ ಸ್ನಾನಬೇಕು. ಏನು ಕಿವಿಗಳಿಗೆ ಸ್ನಾನವೇ? ಅವುಗಳಲ್ಲಿ ನೀರು ನಿಂತರೇನು ಗತಿ? ನೀರು ನಿಲ್ಲದಂತೆ ನಿಗಾ ವಹಿಸಬೇಕು. ಟಬ್‌ನಲ್ಲಿ ಸ್ನಾನ ಮಾಡುವಾಗ ಕಿವಿಗಳ ಒಳಕ್ಕೆ ನೀರು ಹೋಗುವಂತೆ ತಲೆಯನ್ನು ಮುಳುಗಿಸ ಬಹುದು. ಮೊದಲು ಬಲಗಿವಿಗೆ ನೀರು ತುಂಬಿ. ಕೊಂಚ ಕಾಲ ಬಿಟ್ಟಲ್ಲಿ ನೀರು ಬೆಚ್ಚಗಾಗುತ್ತದೆ. ನಂತರ ಬಲಗಿವಿ ಯನ್ನು ಬಲಗೈಯ್ಯಿಂದ ಮುಚ್ಚಿಕೊಂಡು ಕತ್ತನ್ನು ಶರೀರಕ್ಕೆ ೯೦°ಕೋನದಲ್ಲಿ ಬಗ್ಗಿಸಿ ಕೈ ತೆಗೆದುಬಿಡಿ. ಕೊಂಚ ಕಾಲ ಹಾಗೆಯೇ ನಿಲ್ಲಬೇಕು. ನೀರೆಲ್ಲಾ ಹೊರಕ್ಕೆ ಹೊರಟು ಹೋಗುತ್ತದೆ. ಹಾಗೆಯೇ ಎಡಗೈನಿಂದ ಎಡಗಿವಿಯ ನೀರನ್ನು ತೆಗೆಯಬೇಕು. ಹದಿನೈದು ದಿನಕ್ಕೊಮ್ಮೆ ಕಿವಿಗಳಿಗೆ ಕೊಂಚ ಹರಳೆಣ್ಣೆಯನ್ನು ಹಾಕುವುದು ಉತ್ತಮ.

*ಮೂಗನ್ನೂ ಮಾಡಬೇಕು ಮಡಿ :*
*ಮುಖದಲ್ಲಿ ಎದ್ದು ಕಾಣುವ ಅಂಗ ಮೂಗು*
*ಒಳಗಡೆಯ ಸ್ವಚ್ಛತೆಗಾಗಿ ಅದರ ಕೂಗು*
*ಸದಾ ನಡೆಯುತಿಹುದು ಅದಕೆ ಹೊರಗಡೆಯ*
*ಅಲಂಕಾರ*
*ಸುಂದರಿಗೆ ಅದರ ಬಗ್ಗೆ ಬಹು ಮಮಕಾರ*
*ಅವಳ ಸಹಾಯಕಿಹುದು ಕನ್ನಡಿ*
*ಹಾಕುವಳು ಚೆನ್ನದಾ ಬುಗುಡಿ*
*ಆದರೂ ಮೂಗಿಗೆ ನಿತ್ಯ ನೆಗಡಿ*
*ಮೂಗಿನ ಆರೋಗ್ಯಕ್ಕಾಗಿ ಮುನಿಗಳು ಕಲಿತಿದ್ದರು*
*ನೇತಿ*
*ಈಗ ಮಕ್ಕಳಿಂದ ಮುದುಕರವರೆವಿಗೂ ಮೂಗಿನಾ*
*ರೋಗದಾ ಭೀತಿ ಅದರ ನಿವಾರಣೆಗೆ ಹಿಡಿಯೋಣ*
*ಹಠಯೋಗಿಗಳ ದಾರಿ ಮಾಡೋಣ ನೇತಿಯನು*
*ದಿನಕೊಂದು ಬಾರಿ*

ನೇತಿಗಾಗಿ ಬಳಸುವುದು ಬೆಚ್ಚನೆಯ ನೀರು ಮತ್ತು ಉಪ್ಪು. ಇದನ್ನು ಬೆಳಗಿನ ಹೊತ್ತು ಬಳಸುವುದು ಸರಿ. ಸಂಜೆ ತಣ್ಣೀರಿನಲ್ಲಿ ಒಮ್ಮೆ ನೇತಿಯನ್ನು ಮಾಡುವುದರಿಂದ ಮೂಗಿನ ಹೊಳ್ಳೆಗಳನ್ನು ತಂಪಾಗಿಡುತ್ತದೆ. ನಮ್ಮ ಮುಖ್ಯ ಉದ್ದೇಶ ನವದ್ವಾರಗಳನ್ನು ತಂಪಾಗಿಡುವುದೇ ಆಗಿರುವುದರಿಂದ ಸಂಜೆ ಒಮ್ಮೆ ತಣ್ಣೀರಿನಲ್ಲಿ ನೇತಿ ಮಾಡುವುದು ಉತ್ತಮ.

**ಬಾಯಾರಿಕೆಯ ಬವಣೆ :** ಬಾಯಾರಿಕೆ ಶರೀರಕ್ಕೆ ಆದರೆ ಬಾಯಿಗೂ ತನ್ನದೇ ಆದ ಬಾಯಾರಿಕೆ ಉಂಟು. ಬಾಯಿಯಲ್ಲಿನ ಶಾಖ ಶರೀರದ ಇತರ ಕಡೆಯ ಶಾಖಕ್ಕಿಂತ ಕೊಂಚ ಹೆಚ್ಚು, ಆದರೆ ಅದು ತುಂಬಾ ಹೆಚ್ಚಾಗಿರಬಾರದು. ಬೀಡಿ, ಬಿಸಿ ಕಾಫಿ, ಟೀಗಳಿಂದ ಸುಡುವವರನ್ನು ಬಿಟ್ಟರೂ, ಇತರರಿಗೂ ಸಹ ಬಾಯಿಯ ದಾಹದಿಂದ ಇರುವುದು ಸರ್ವೇ ಸಾಮಾನ್ಯ. ಆಗಾಗ ಕೊಂಚ ತಣ್ಣೀರನ್ನು ಬಾಯಿಗೆ

ಹಾಕಿಕೊಂಡು ಮುಕ್ಕಳಿಸಿ ಉಗುಳುವುದು ಉತ್ತಮ. ಹೀಗೆ ಮಾಡುವುದಕ್ಕೆ 'ಗಂಡೂಷ' ಎಂದು ಆಯುರ್ವೇದದಲ್ಲಿನ ಹೆಸರು. ಜಲಬಾಧೆಯ ನಂತರ ಮೂರು ಸಲ, ಮಲವಿಸರ್ಜನೆಯ ನಂತರ ಆರು ಸಲ ಹೀಗೆ ಮಾಡಬೇಕೆಂಬ ಧಾರ್ಮಿಕ ನಿಬಂಧನೆಯನ್ನು ಹಾಕಿದ್ದರು. ಈಚೆಗೆ ಒಬ್ಬ ರಷ್ಯದ ವಿಜ್ಞಾನಿ 'ಆಯಿಲ್ ಪುಲ್ಲಿಂಗ್' ಎಂಬ ಹೆಸರಿನಿಂದ ಎಣ್ಣೆಯ ಗಂಡೂಷವನ್ನು ಜಾರಿಗೆ ತಂದಿದ್ದಾನೆ. ಹಿಂದೆ ಆಯುರ್ವೇದ ದಲ್ಲಿ ಎಣ್ಣೆ ಅಥವಾ ಇತರ ಔಷಧಗಳಿಂದ ಈ ರೀತಿ ಮಾಡುವ ರೂಢಿಯಿತ್ತು. ದಿನಕ್ಕೆ ನಾಲ್ಕೈದು ಬಾರಿ ತಣ್ಣೀರಿ ನಲ್ಲಿ ಬಾಯಿ ಮುಕ್ಕಳಿಸುವುದು ಎಲ್ಲಕ್ಕಿಂತ ಸರಳ, ಸುಲಭ ಉಪಾಯ.

**ಜಲ ಸ್ಪರ್ಶ :** ಮೂತ್ರ ವಿಸರ್ಜನೆಯ ನಂತರ ಜನನೇಂದ್ರಿಯವನ್ನು ತಣ್ಣೀರಿನಲ್ಲಿ ತೊಳೆಯುವುದು. ಇದನ್ನು ಜಲಸ್ಪರ್ಶ ವೆನ್ನುವರು. ಇದರ ಜೊತೆಗೆ ಜನನೇಂದ್ರಿಯದ ಸ್ನಾನವನ್ನು ದಿನಕ್ಕೊಮ್ಮೆ ಮಾಡುವುದು ಉತ್ತಮ. ಇದರ ಬಗ್ಗೆ ಹಿಂದೆ ಹೇಳಲಾಗಿದೆ.

**ಮೂಲದ ಮುಖ್ಯತೆ :** ಗುದದ್ವಾರಕ್ಕೆ ಶರೀರದ ಮೂಲವೆಂದು ಹೆಸರು. ಆ ಹೆಸರಿನಿಂದಲೇ ಅದರ ಪ್ರಾಮುಖ್ಯತೆ ಅರ್ಥ ವಾಗುತ್ತದೆ. ಅದರಲ್ಲಿನ ಶಾಖ ಶರೀರದ ಎಲ್ಲ ಕಡೆಯ ಶಾಖಕ್ಕಿಂತ ಹೆಚ್ಚು. ಆ ಶಾಖವನ್ನು ಆಗಾಗ ತೆಗೆಯಬೇಕು. ಇಲ್ಲದಿರೆ ಮೂಲವ್ಯಾಧಿಯಿಂದ ಮುಂದೆ ನರಳಬೇಕು. ಗುದದ್ವಾರವನ್ನು ಕೆಳಕ್ಕೆ ಅದುಮಿ ಕುಳಿತುಕೊಳ್ಳುವ ಪ್ರಾಣಿ ಮನುಷ್ಯನೊಬ್ಬನೆ! ಹಾಗೆ ಗಂಟೆಗಟ್ಟಲೆ ಕುಳಿತಿರುತ್ತಾನೆ. ಅಲ್ಲದೆ ತನ್ನ ಕೆಲಸವನ್ನು ಕುಳಿತೇ ಮಾಡುತ್ತಾನೆ. ನಾಗರೀಕತೆ ಹೆಚ್ಚಿದಷ್ಟೂ ಸೋಫಾ ಇತ್ಯಾದಿಗಳ ಆಗಮನ. ಮಲಗಲು ಫೋಮ್ ಬೆಡ್ ಇತ್ಯಾದಿಗಳು. ಹೀಗಾಗಿ ಗುದದ್ವಾರ ದೊಳಗಿನ ಶಾಖ ಮತ್ತು ಹೆಚ್ಚುತ್ತದೆ. ಆದ್ದರಿಂದ ಆ ಜಾಗವನ್ನು ಆಗಾಗ ತಣ್ಣೀರಿನಿಂದ ತೊಳೆದುಕೊಳ್ಳಬೇಕು. ಸ್ವಲ್ಪವೇ ಸ್ವಲ್ಪ ತಣ್ಣೀರಿನಿಂದ ತಡೆಹಿಡಿದ ಎನಿಮಾ ತೆಗೆದು ಕೊಳ್ಳಬೇಕು. ಎನಿಮಾ ಬಗ್ಗೆ ಮುಂದೆ ಹೇಳಲಾಗುತ್ತದೆ.

ಒಟ್ಟಿನಲ್ಲಿ ನವದ್ವಾರಗಳನ್ನು ನಿತ್ಯವೂ ತಣ್ಣೀರಿನಿಂದ ತಂಪುಗೊಳಿಸಿಕೊಳ್ಳಬೇಕು. ಇದರಿಂದ ಶರೀರವು ತಂಪಾಗುತ್ತದೆ.

*ನಮ್ಮದಿದು ಉಷ್ಣ ದೇಶ*
*ಶರೀರವನು ತಂಪುಗೊಳಿಸಬೇಕೆಂಬುದೇ ಸಂದೇಶ*
*ಹಾಗೆಯೇ ಬಿಟ್ಟರೆ ದಹಿಸುವನು ಸೂರ್ಯ*
*ತಂಪುಗೊಳಿಸಬೇಕಾದದ್ದು ಕರ್ತವ್ಯವಯ್ಯ ಆರ್ಯ*
*ಇಲ್ಲದಿರೆ ಒಂದಲ್ಲ ಒಂದು ರೋಗ*
*ನವದ್ವಾರಗಳನು ತಂಪುಗೊಳಿಸು ಆಗಾಗ*

**ಹಬೆಸ್ನಾನ : (Steam bath)**

ಮನೆಯಲ್ಲಿನ ಹಬೆಸ್ನಾನಕ್ಕೂ ನಿಸರ್ಗ ಚಿಕಿತ್ಸಾಲಯ ದಲ್ಲಿನ ಹಬೆಸ್ನಾನಕ್ಕೂ ವ್ಯತ್ಯಾಸವಿದೆ. ಇಲ್ಲಿ ಮನೆಯಲ್ಲಿನ ನಿಸರ್ಗೋಪಚಾರವನ್ನು ಹೇಳುತ್ತಿರುವುದರಿಂದ ಮನೆಯಲ್ಲಿನ ಹಬೆಸ್ನಾನವನ್ನೇ ಹೇಳಲಾಗಿದೆ. ಹಗ್ಗದ ಮಂಚದ ಮೇಲೆ ರೋಗಿಯನ್ನು ಕಡಿಮೆ ಬಟ್ಟೆಯನ್ನು ಹಾಕಿ ಮಲಗಿಸಬೇಕು. ರಗ್ಗು ಮಂಚದ ಸುತ್ತಲೂ ನೆಲದವರೆವಿಗೂ ನಾಲ್ಕು ಕಡೆ ಗಳಲ್ಲಿಯೂ ಇಳಿಬಿಡುವಂತೆ ಹೊದಿಸಬೇಕು. ಮಂಚದ ಕೆಳಗೆ ಒಂದೆರಡು ಪಾತ್ರೆಗಳಲ್ಲಿ ಹಬೆ ಬರುತ್ತಿರುವ ಬಿಸಿನೀರನ್ನು ಇಡಬೇಕು. ತಲೆಗೆ ಒಂದು ತಣ್ಣೀರಿನ ಪಟ್ಟಿಯನ್ನು ಕಟ್ಟಬೇಕು. ಮಲಗಿಸುವ ಮುಂಚೆ ರೋಗಿಗೆ ಒಂದು ಲೋಟ ಬಿಸಿ ನೀರನ್ನು ಕುಡಿಸಿರಬೇಕು. ಹತ್ತರಿಂದ ಇಪ್ಪತ್ತು ನಿಮಿಷಗಳ ಕಾಲ ಹಾಗೆಯೇ ಇರುವುದು.

ಮಂಚವಿಲ್ಲದವರು ಕುರ್ಚಿಯ ಮೇಲೆ ಕುಳಿತು ಮೇಲಿನಂತೆ ಹಬೆಸ್ನಾನ ಮಾಡಬಹುದು. ಚರ್ಮದ ರಂಧ್ರದಗಳನ್ನು ತೆರೆದು ಕೊಳೆಯನ್ನು ಆ ಮೂಲಕ ಹೊರಗೆ ಹಾಕಲು ಈ ಸ್ನಾನ ಸಹಾಯ ಮಾಡುತ್ತದೆ. ಶರೀರದ ಕೊಬ್ಬನ್ನು ಇಳಿಸಲು ಈ ಸ್ನಾನದ ಉಪಯೋಗ ಹೆಚ್ಚು. ಅಂತಹವರು ನಿಸರ್ಗ ಚಿಕಿತ್ಸಾಲಯುದಲ್ಲಿಯೇ ಈ ಸ್ನಾನವನ್ನು ಮಾಡುವುದು ಉತ್ತಮ.

–ಮುಂದುವರೆಯುತ್ತದೆ.

**ಕಿತ್ತಳೆ ಹಣ್ಣು**

ಕಿತ್ತಳೆ ಹಣ್ಣಿನ ಸಿಪ್ಪೆಯನ್ನು ಹಿಚುಕಿದಾಗ ಬರುವ ರಸವನ್ನು ಮೊಡವೆಗಳ ಮೇಲೆ ಸವರುತ್ತಾ ಬಂದರೆ ಮೊಡವೆಗಳು, ಕಪ್ಪು ಕಲೆಗಳು ಸರಿಯುತ್ತವೆ. ರಕ್ತ ಶುದ್ಧಿಯಾಗುತ್ತದೆ. ಗರ್ಭಿಣಿಯರು ಕಿತ್ತಳೆಯನ್ನು ಕ್ರಮವಾಗಿ ಸೇವಿಸುವುದರಿಂದ ಹೆರಿಗೆ ಸುಖಕರ ವಾಗಿ ಆಗುತ್ತದೆ. ಕಿತ್ತಳೆಯ ಹಣ್ಣಿನ ರಸವನ್ನು ಸೇವಿಸು ವುದರಿಂದ ಆಯಾಸ, ದಾಹ, ಹೃದಯ ದೌರ್ಬಲ್ಯ ನಿವಾರಣೆಯಾಗುತ್ತದೆ.



ಶ್ರೀ ವಿ. ಸೋಮಣ್ಣನವರು ಸಚಿವರಾಗಿ ಪ್ರಮಾಣ ವಚನ ಸ್ವೀಕರಿಸಿದ ನಂತರ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀಗಳವರಿಂದ ದಿವ್ಯಾಶೀರ್ವಾದ ಪಡೆದರು



ಧರ್ಮಸ್ಥಳದ ಶ್ರೀ ಮಂಜುನಾಥ ದೇವಾಲಯದ ವತಿಯಿಂದ ಶ್ರೀಮಠದಲ್ಲಿ ನಡೆದ ಸಮಾರಂಭದಲ್ಲಿ ಸರ್ಕಾರಿ ಶಾಲೆಗಳಿಗೆ ಡೆಸ್ಕ್-ಬೆಂಚ್‌ಗಳನ್ನು ವಿತರಿಸಲಾಯಿತು.



ತುಮಕೂರು ವಿಶ್ವವಿದ್ಯಾನಿಲಯದ ನೂತನ ಕುಲಪತಿ ಡಾ. ಎಸ್.ಸಿ. ಶರ್ಮಾ ಅವರು ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀಗಳವರಿಂದ ಆಶೀರ್ವಾದ ಪಡೆದರು



ಚಿಂತಾಮಣಿಯಲ್ಲಿ ನಡೆದ ವಿದ್ಯಾರ್ಥಿನಿಲಯದ ಶಿಲಾನ್ಯಾಸ ಸಮಾರಂಭದಲ್ಲಿ ಪರಮಪೂಜ್ಯ ಶ್ರೀಗಳು, ಸಚಿವ ಶ್ರೀ ವಿ. ಸೋಮಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು

ತುಮಕೂರಿನ ಮೈತ್ರಿ ಮಹಿಳಾ ಸಂಘ ಸದಸ್ಯರು ಶ್ರೀಮಠಕ್ಕೆ ಆಗಮಿಸಿ ಪರಮಪೂಜ್ಯ ಶ್ರೀಗಳವರ ದಿವ್ಯಪಾದಪೂಜೆ ನೆರವೇರಿಸಿದರು



ಕಿರಿಕೊಡ್ಲಿಮಠದ ವತಿಯಿಂದ ಸ್ಥಾಪಿಸಲಿರುವ ಶ್ರೀ ಗುರುಸಿದ್ಧ ಸ್ವಾಮಿ ವಿದ್ಯಾಪೀಠದ ಕಟ್ಟಡದ ಶಿಲಾನ್ಯಾಸ ಸಮಾರಂಭದಲ್ಲಿ ಸಿದ್ಧಗಂಗಾ ಕಿರಿಯ ಶ್ರೀಗಳು, ಕಿರಿಕೊಡ್ಲಿಮಠದ ಶ್ರೀಗಳು ಉಪಸ್ಥಿತರಿದ್ದರು

Cover printed at : Geetanjali Graphics, # 4, M.S.R. Indl. Estate, Bangalore-54. Ph : 23604087